ಮಾವು, ರಸದ ದಾಳಿಂಬೇ। ನೇರಳೇ ನಿಂಬೆಯ ಹಣ್ಣನ್ನು ತಂದು। ಬಾಳೆಕಿತ್ತಳೆ ಮಾವು ಮಾದಳದ ಹಣ್ಣು। ಹಸಿ ಅಡಿಕೆ ರಸಬಾಳೆ ಕಬ್ಬು ಕಟ್ಟಿದರು॥ಲಾಲಿ॥ ಅಂದುಗೆ ಕಿರುಗೆಜ್ಜೆ ಚರಣದಲಿ ಹೊಳೆಯೇ। ಹೊಂಬಣ್ಣ ಜರತಾರಿ ನಿಲುಕಟ್ಟು ಕಟ್ಟೀ। ದೃಷ್ಟಿ ಬೊಟ್ಟನೆ ಇಟ್ಟು ಹುಬ್ಬು ಬೇಗ ತಿದ್ದಿ । ಮತ್ತೆ ಕದಲಾರತಿಯನೆತ್ತಿ ಹರಸಿದರು॥ಲಾಲಿ॥ ಪಾತಾಳ ಮನೆಯಲ್ಲಿ ಪಾದಕ್ಕೆ ರಕ್ಷೇ। ಮಲಗಿದ್ದ ಮನೆಯಲ್ಲಿ ಹಸ್ತಕ್ಕೆ ರಕ್ಷೇ। ಅಂಗಾಲಿಗೇ ರಕ್ಷೇ। ಆನಂದಗೆ ರಕ್ಷೇ। ಆನಂದ ಮೂರುತಿ। ಶ್ರೀರಾಮಗೆ ರಕ್ಷೆ॥ಲಾಲಿ॥

### ರತ್ನದಾ ಮಂಚದ ಮೇಲೆ

ರತ್ನದಾ ಮಂಚದ ಮೇಲೆ ಪವಡಿಸಯ್ಯಾ ಪುರುಷೋತ್ತಮನೇ। ಅಚ್ಯುತಾ ನಿನಗೇ ನಾನು ಜೋಗುಳವಾ ಪಾಡುವೆನಯ್ಯಾ॥ಪ॥ ರಘುವಂಶದಿ ಜನಿಸಿದ ನಿನ್ನ ದಶರಥನಾ ಕಾಂತೆಯು ತಾನು। ತೊಟ್ಟಿಲಲ್ಲಿ ತೂಗಿದ ತೆರದೀ ಜೋಗುವಳ ಪಾಡುವೆನಯ್ಯಾ॥1॥ ಹದಿನಾಲ್ಕು ಲೋಕದಾ ಒಡೆಯ ನೀನೆಂದು ತಿಳಿಯದೆ ನಾನು। ಯಶೋದೆಯು ರಮಿಸಿದ ತೆರದಿ ಜೋಗುಳವ ಪಾಡುವೆನಯ್ಯಾ॥2॥ಭಕ್ತರಾಧೀನನೆ ಬಂಧನವ ಬಿಡಿಸುವವನೆ। ಮುಕ್ತಿ ಕೋರಿ ಬಂದೆನಮ್ಮ ಜೋಗುಳವ ಲಾಲಿಸೋ ಹರಿಯೇ॥3॥ಸಿರಿದೇವಿ ಭೂದೇವಿಯರ ನೀ ಧರಿಸಿ ನೆಲಸಿ ಇರುವೆ।ಶ್ರೀನಿವಾಸನೆ ಎನ್ನ ಶ್ಯಾಮಲಾಂಗ ಕೋಮಲ ವದನಾ॥4॥

### ಲಾಲಿ ಶ್ರೀ ಕೃಷ್ಣಯ್ಯ — ರಾಗ: ನೀಲಾಂಬರಿ

ಲಾಲಿ ಶ್ರೀ ಕೃಷ್ಣಯ್ಯ ನೀಲ ಮೇಘ ವರ್ಣ ಬಹು ನೀಲ ಮೇಘವರ್ಣ। ಬಾಲ ಗೋಪಾಲ ಪವಡಿಂಚವಯ್ಯ॥ಪ॥ ಶೃಂಗಾರಿಂಪಗಮಂಚಿ ಬಂಗಾರು ತೊಟ್ಲಲ್ಲೋ ಶಂಕುಚಕ್ರಧರ। ಸ್ವಾಮಿ ನಿದುರ ಪೋವಯ್ಯ॥1॥ ಸೇತು ನೀ ಮಾರಶ್ಯೆಯ್ಯಾ ವಾಸುದೇವುಡಯ್ಯಾ ಸ್ವಾಮಿ ಶೇಷಶಯನಕರಾ ಸ್ವಾಮಿ ನಿದ್ರ ಪೋವಯ್ಯ॥2॥ ಪೊದ್ದು ಚಾಲ ಆಯರಾ ಮುತ್ತೈನ ಇವ್ವರಾ ಸದ್ದಿಬೋಂ ಚೇಯರಾ ಸಖಿಯಲತೊ ಆಡರಾ॥ಯವರು ಕಾವಲೆ ನೀಕು ಇಂದರಿಲೋನೈನ ಸೊಗಸೈನ ಅಲಮೇಲು ಮಂಗಯೆ ಕಾವಲನಾ॥ನಗುಮೋಮು ಅಗುಬೀಬೀನಾಂಚಾರೇ ಕಾವಲನಾ॥3॥

### ಶ್ರೀವಾಸುದೇವ ಲಾಲಿ — ರಾಗ: ಶಂಕರಾಭರಣ, ಏಕತಾಳ

ಶ್ರೀವಾಸುದೇವ ಲಾಲಿ। ಶ್ರೀತಪಾಲ ಲೀಲ ಲಾಲಿ। ದೇವಾದಿವಂದ್ಯ ಲಾಲಿ। ದೀನಜನಪಾಲ ಲಾಲಿ॥ಪ॥ ಕರುಣಾಲವಾಲ ಪಾಲ। ಕಮಲಾ ವಿನೋದ ಶೀಲಾ। ಶರಣಾಗತಾನುಕೂಲ। ಕ್ಷಮಿತಾಖಿಳಾಂಕ ಜಾಲಾ॥1॥ ಕಾಳೀಯ ದರ್ಪದಮನಾ। ಕರಿರಾಜ ಮಂಜುಗಮನಾ। ಲೀಲಾದಿ ಯುಗತಿಗಮನಾ। ನಿರುಪಾಯಮಾನ ವಸನಾ॥2॥ ಗೋಪಾಲ ನೀಲಕಾಯ। ಗೋವಿಂದ ಭಕ್ತಗೇಯ। ತಾಪತ್ರ ಐಕ್ಯ ನಿಲಯಾ। ಶ್ರೀಪಾರ್ಥನಾಥ ನಿಲಯಾ॥3॥

## ಶ್ರೀಕೃಷ್ಣಸ್ತುತಿ ಮತ್ತು ಕೊಳಲು

## ದೇವರನಾಮ

### ಓಂಕಾರ ಸದನ ಘೃಣಿಕಥನಾ — ರಾಗ: ಆಂದೋಳಿಕ

ಓಂಕಾರ ಸದನ ಘೃಣಿಕಥನಾ॥ಪ॥ ಕಿಂಕರರ ಹೃತ್ಪಂಕಜದೊಳಗೆ। ಕಂಕಣದ ಪರಿ ಅಂಕುರಿಸಿರುವ॥ಅ.ಪ॥ ಪ್ರಣವಾದಿ ಜನಿತಾಷ್ಟ ತಾರಾಕ್ಷರಾ। ತಜ್ಜನಿತ ವ್ಯಾಹೃತಿ ಜನ್ಯ ದಶ ದ್ವೇಕ್ಷದ। ಘನಗಾಯತ್ರಿ ಮಂತ್ರದೊಳು ರೂಪ ಕೃಷ್ಣಾಂತ। ಅನುಸೂಕ್ತ ನಿನಮೇಲೆ ಹಾಸಪುರಾಣದ॥1॥ ಸೋಮಾರ್ಕನಲ ಧಾಮತ್ರಯ ಜೃಂಬಿತ। ತ್ರೈಮಾರ್ಗ ವ್ಯವಹಾರ ನೇಮಾದೃತ। ವ್ಯೂಮಾಭಿಮಾನೀ। ಹೃಧಾಮ ಮಹನ್ನತ। ಶ್ರೀಮೂಲ ವಾಸುದೇವಾಮ್ನಾಯ ಮಂತ್ರದ॥2॥ ಅಜ

ಆನಂದಾದೇತ ಪಂಚಾಶತ। ಸ್ವಜರೂಪೌವಿರ್ಭಾವ ಬುಧ ಪ್ರಾರ್ಚಿತ। ವಿಜಯಾರ್ಯನುತ ತಂದೆ ವೆಂಕಟೇಶ ವಿಠಲನ್ನ। ನಿಜಭಕ್ತ ಜನರ ದಿಗ್ವಿಜಯ ಮಾಡಿಸುವ॥2॥

**ಕರುಣಿಸಿ ವೃಷ್ಟಿಗರೆಯೇ** **ರಾಗ: ಕಾನಡ, ಝಂಪೆ**

ಕರುಣಿಸಿ ವೃಷ್ಟಿಗರೆಯೇ ಕಮಲನಯನ। ನರರುಗಳ ಅಪರಾಧ ನೋಡದೆಲೆ ವೇಗದಲಿ॥ಪ॥ ಅನ್ನದಿಂದಲಿ ಭೂತಗಣ ಉದ್ಭವಿಸುವುದು। ಅನ್ನದಿಂದಲಿ ಅಭಿವೃದ್ಧಿಯಾಪುದು। ಅನ್ನದಿಂದಲಿ ತ್ರಿವಿಧ ಸಾಧನವು ಪೂರ್ತಿಪದು। ಪರ್ಜನ್ಯ ದಿಂದಲಿ ಅನ್ನ ಜನಿಸುವ ಕಾರಣ॥1॥ 'ಭೀಷ್ಮಾಸ್ಮ ಪ್ಯಾತಃ ಪವತೆ' ಎಂಬೋಕ್ತಿಯಲಿ ಈ ಸಮಸ್ತಮರರು ನಿನ್ನಭಯದಿ ಬ್ಯಾಸರದೆ ತಮ್ಮ ತಮ್ಮ ವ್ಯಾಪಾರಗಳ ಮಾಡಿ ಪೋಷಿಸುವರು ಜಗದಿ ಪ್ರೀತಿಯಿಂದ॥2॥ "ವರ್ಷಾಂ ನಿಗೃಹ್ಣಾಮಿ ಸೃಜಾಮಿಚ" ಎಂದು ಹರಿಯೆ ನಿನ್ನಿಂದಲೇ ವ್ಯಾಪಾರವಾಯ್ತು (ವ್ಯಾಡರಿಸಿತು) ಸುರಪತಿ - ವರುಣಾದಿ ಸುರರು ನಿಮಿತ್ಯರು। ಪರಮಗುಣಸಾಂದ್ರ ಹೇ ಕರುಣಾಬ್ಧಿಚಂದ್ರ॥3॥ ನರನೊಬ್ಬ ಪ್ರಭುತನ್ನ ಪರಿಚರರನು। ಪರಮ ಅಭಿಮಾನದಲಿ ಪರಿಪಾಲಿಪ। ಸುರರ ಬ್ರಹ್ಮಾದಿಗಳ ದೊರೆಯೆ ನಿನಗೀ ಮಾತು। ಸರಿಹೋದರೀ ವಚನ ಸಲಿಸು ಕೃಪೆಯಿಂದ॥4॥ ಆವಾವ ಸಾಧನದಿ ಆವ ಸುಖ ವೈದುತಿರೆ। ದೇವ ನಿನ್ನಯ ಕೀರ್ತಿ ಬರುವದೆಂತೋ। ದೇವ ದೇವೇಶ ಗುರು ವಿಜಯವಿಠಲರೇಯ। ಸಾವಧಾನದಿ ತಿಳಿದು ಪಾಲಿಪುದು ಭಿನ್ನಪವ॥5॥

**ದೇವಕಿ ಕಂದ ಮುಕುಂದ** **ರಾಗ: ಬೇಹಾಗ್, ಆದಿತಾಳ**

ದೇವಕಿ ಕಂದ ಮುಕುಂದ॥ಪ॥ ನಿಗಮೋದ್ಧಾರ ನವನೀತ ಚೋರ॥ ಖಗಪತಿ ವಾಹನ ಜಗದೋದ್ಧಾರ॥1॥ ಶಂಖ ಚಕ್ರಧರ ಶ್ರೀ ಗೋವಿಂದ। ಪಂಕಜಲೋಚನ ಪರಮಾನಂದ॥2॥ ಮಕರಕುಂಡಲಧರ ಮೋಹನವೇಷ। ರುಕುಮಿಣಿ ವಲ್ಲಭ ಪಾಂಡವ ಪೋಷ॥3॥ ಕಂಸಮರ್ದನ ಕೌಸ್ತುಭಾಭರಣ। ಹಂಸವಾಹನ ಪೂಜಿತ ಚರಣ॥4॥ ವರವೇಲಾಪುರ ಚೆನ್ನ ಪ್ರಸನ್ನ। ಪುರಂದರವಿಠಲ ಸಕಲ ಗುಣಪೂರ್ಣ॥5॥

**ಧ್ಯಾನದಲಿ ಮೈ ಮರೆತು** **ರಾಗ: ಭೌಳಿ, ಆದಿತಾಳ**

ಧ್ಯಾನದಲಿ ಮೈ ಮರೆತು ಕನಸೊಂದ ನಾ ಕಂಡೆ। ಬದರಿನಾರಾಯಣನ ದಿವ್ಯ ದರುಶನ ಕಂಡೆ॥ಪ॥ ಅತಿ ಸುಂದರವಾದ ಹಿಮಶಿಖರವ ಕಂಡೆ। ಶಿಖರದಿ ನೆಲೆಸಿರುವ ನಾರಾಯಣನ ಕಂಡೆ। ಎಡಬಲದಿ ಸೇವಿಸುವ ಗರುಡ ನಾರದನ ಕಂಡೆ। ಮೈ ಮರೆತು ಧ್ಯಾನಿಸುವ ಭಕ್ತರನು ನಾ ಕಂಡೆ॥1॥ ಪೀತಾಂಬರ ವಜ್ರ ಕಿರೀಟ ಮುಕುಟದಿ ಕಂಡೆ। ಅಭಯ ಹಸ್ತದಿ ಶಂಕು ಚಕ್ರವನು ನಾ ಕಂಡೆ। ನಂದಾದೀಪಗಳ ಬೆಳಕನ್ನು ನಾ ಕಂಡೆ। ಶತಕೋಟಿ ಸೂರ್ಯ ಕಿರಣದ ತೇಜವನು ಕಂಡೆ॥2॥ ಪತ್ರ ಪುಷ್ಪ ಅರ್ಪಿಸುವ ಮನುಜರನು ನಾ ಕಂಡೆ। ಮಿಂದು ಸೇವೆ ಮಾಡುವವರ ಕಂಡೆ। ಪಾದಸೇವೆ ಮಾಡುವ ಸರ್ವರನು ನಾ ಕಂಡೆ। ರಕ್ಷಿಸು ಕುಕ್ಕೆ ಸ್ವಾಮಿ ಎಂದು ಬೇಡುವರನು ಭಕ್ತಿಲಿ ಕಂಡೆ॥3॥

**ನಡು ನೀರೊಳು ಕೈಯ್ಯ ಬಿಡುವರೆ** **ರಾಗ:ಕಾನಡ**

ನಡು ನೀರೊಳು ಕೈಯ್ಯ ಬಿಡುವರೆ॥ಪ॥ ಕಡೆಹಾಯಿಸೋ ಹೇ ಮುರಾರೇ॥ ನಾನು ಸಡಗರದೊಳು ಸಂಸಾರ। ಕಡಲಿನೊಳಗೇ। ಮುಳಿಗಿರುವುದಾ। ನೋಡಿ ನಗುವೋವ್ಯಾಪಾರ। ಬಿಡುಬಿಡು ರಘುವೀರಾ॥1॥ ಅಡಿಗಡಿಗಾಧಾರದಿಂ। ಪಿಡಿಯಲೆ ನಗೆತೃಣವು ಇಲ್ಲ। ಕಡಲು ಮುಳುಗುವ ಸಮಯವಲ್ಲ। ಓಡಿಬಾರೋ ಹೇ ಗೋಪಾಲ॥2॥ ಪರರ ನಾನೂ ಬೇಡಲಾರೆ। ಪರರ ಬಾಗಿಲ ಕಾಯಲಾರೆ ಪರರ ಹಿಂದೇ ತಿರುಗಲಾರೆ। ಪರರ ಮಾತ ಹೇಳಲಾರೇ॥3॥ ಪರರ ಸ್ತುತಿಯಾ ಮಾಡಲಾರೇ। ಪರರಿಗೇ ನಾ ನಮಿಸಲಾರೇ। ಪರಮ ಮಂಗಳಮೂರುತಿ ನೀನೇ। ಪರರ ಬೇಡುವಂತೆ ಮಾಳ್ಪರೇ॥4॥ ವಿಷಯದಾಸೆ ತೀರಲಿಲ್ಲ। ವಿಷಯಕ್ಕೆ ಮೋಸ ಹೋದೆನಲ್ಲ। ವಿಷಯವನೀನೆ ಬಲ್ಲೆಯಲ್ಲ। ... ವಿಠಲಾ॥5॥ವಿಷಯ ಮನಸ್ಸಿನೊಳಿಡದೇ ಪೋಷಿಸಯ್ಯ ಕೈಯ್ಯ ಬಿಡದೇ ಶೇಷಗಿರೀಶ ನಿನ್ನ ನಂಬಿದೆ ವಾಸುದೇವ ಹೇ ದಯಾನಿದೇ॥6॥

**ಬಾರೋ ಬೇಗ ನೀರಜಾಕ್ಷ** **ರಾಗ: ಆರಭಿ, ರೂಪಕತಾಳ**

ಬಾರೋ ಬೇಗ ನೀರಜಾಕ್ಷ ದೂರು ಇದು ಯಾತಕೋ॥ಪ॥ ಮೊಸರು ಮಾರುವ ಗೊಲ್ಲತಿಯರ। ಅಸವಳಿಸಿ ಕೈಯ ಪಿಡಿದು। ವಶವಾಗು ಎಂದು ಪೇಳಿ। ನಸುನಗುತಲಿ ಇದ್ದೆಯಂತೆ॥1॥ ಕುಸುಮ ಶರನ ಪೆತ್ತವನೆ। ಬಸವನಾದೆ ಊರೊಳಗೆ। ಶಶಿಮುಖಿಯರ ದೂರು ಬಹು। ಪಸರಿಸಿತು ಪೇಳಲಾರೆ॥2॥ ಕಂದ ಕೇಳು ಇಂದುಮುಖಿಯರ। ಹೊಂದಿ ಆಡಲೇಕೆ। ಈ ಮಂದಿರದೊಳು ಆಡಿ ಸಲಹೋ। ತಂದೆ ಉಡುಪಿ ಸಿರಿ ಕೃಷ್ಣ॥2॥

**ಮಂದಗಮನೆ ಇವನಾರೆ** **ರಾಗ: ಕಮಾಚ್, ಆದಿತಾಳ**

ಮಂದಗಮನೆ ಇವನಾರೆ ಪೇಳಮ್ಮ। ಮಂದರಧರ ಗೋವಿಂದ ಕಾಣಮ್ಮ॥ಪ॥ ಕೆಂದಳಿರು ನಖ ಶಶಿಬಿಂಬ ಪದಪದ್ಮ। ಅಂದುಗೆ ಇಟ್ಟವನಾರೆ ಪೇಳಮ್ಮ॥ ಅಂದು ಕಾಳಿಂಗನ ಹೆಡೆಯ ತುಳಿದ ದಿಟ್ಟ। ನಂದನ ಕಂದ ಮುಕುಂದ ಕಾಣಮ್ಮ॥1॥ ಉಡುಗೆ ಪೀತಾಂಬರ ನಡುಗೆ ಹೊನ್ನುಡುದಾರ। ಕಡಗ ಕಂಕಣವಿಟ್ಟವನಾರಮ್ಮ॥ ಮಡದಿ ಕೇಳ್ ಸಕಲ ಲೋಕಂಗಳ ಕುಕ್ಷಿಯೊ। ಳೊಡನೆ ತೋರಿದ ಜಗದೊಡೆಯ ಕಾಣಮ್ಮ॥2॥ ನೀರದ ನೀಲದಂತೆಸೆವ ವಕ್ಷದಿ ಕೇ। ಯೂರ ಹಾರವಿಟ್ಟವನಾರಮ್ಮ॥ ನೀರೆ ಕೇಳು ನಿರ್ಜರರಾದವರಿಗೆ। ಪ್ರೇರಿಸಿ ಫಲವಿತ್ತು ದಾರಿಕಾಣಮ್ಮ॥3॥ ಶಂಖಚಕ್ರವು ಗದೆ ಪದ್ಮಕೈಯೊಳಗಿಟ್ಟಲಂಕರಿಸುವನೀತನಾರಮ್ಮ॥ ಪಂಕಜಮುಖಿ ಶ್ರೀ ಭೂದೇವಿಯರಸನು। ಶಂಕೆಯಿಲ್ಲದೆ ಗೋಪಿತನಯ ಕಾಣಮ್ಮ॥4॥ ಕಂಬುಕಂಧರ ಕರ್ಣಾಲಂಬಿತಕುಂಡಲ। ಅಂಬುಜ ಮುಖದವನಾರೆ ಹೇಳಮ್ಮ॥ ರಂಭೆ ಕೇಳೀತ ಪುರಂದರವಿಠ್ಠಲ॥ ನಂಬಿದ ಭಕ್ತಕುಟುಂಬಿ ಕಾಣಮ್ಮ॥5॥

**ಯಾರೇ ಬಂದವರು ಮನೆಗೆ** **ರಾಗ: ಹಿಂದೋಳ, ಆದಿತಾಳ**

ಯಾರೇ ಬಂದವರು। ಮನೆಗೆ ಮತ್ಯಾರೇ ಬಂದವರು॥ಪ॥ ನಾರಾಯಣ ಕೃಷ್ಣನಾಥನಲ್ಲದೇ ಬೇರೆ॥ಅ॥ ವಜ್ರರೇಖೆಗಳಿವೆ ಮನೆಯಲ್ಲಿ ಕಾಲ। ಗೆಜ್ಜೆ ಧ್ವನಿ ಕೇಳಿ ಬರುತಲಿದೇ। ವಜ್ರ ಮಾಣಿಕ್ಯವೆಲ್ಲಾ ಹರಿದು ಬಿದ್ದಿವೆ। ಮಜ್ಜಿಗೆಯೊಳಗಿನ ಬೆಣ್ಣೆಯ ಕಾಣೆ॥1॥ ಕೊಂಬುಕೊಳಲು ಧ್ವನಿ ರಭಸಗಳಿವೆ। ಕದಂಬ ಕಸ್ತೂರಿಯ ಪೆಂಪೆಸೆದಿವೆ। ಪೊಂಬಟ್ಟೆ ಚಲ್ಲಣ್ಣ ಚೆಲ್ಲಿದೆ ಹಾಲು। ಕುಂಭ ಒಡೆದು ಮನೆ ತುಂಬ ಚೆಲ್ಲಾಡಿದೆ॥2॥ ಮಿಂಚುಹುಳುವಿನಂತೆ ಹೊಳೆಯುತಲಿ।ತಮ್ಮ। ಸಂಚರರೊಡಗೂಡಿ ಚಲಿಸುತ್ತ। ವಂಚಿಸಿ ಬೆಣ್ಣೆಯ ಮೆಲ್ಲುತಲಿ ನಮ್ಮ ಲಂಚದ ಪುರಂದರ ವಿಠ್ಠಲನಲ್ಲದೆ ಬೇರೆ॥3॥

**ರಜತ ಪೀಠದಿ ನೆಲೆಸಿ** **ರಾಗ:ಮಲಹರಿ**

ರಜತ ಪೀಠದಿ ನೆಲೆಸಿ, ಭಕ್ತ ವ್ರಜವ ಸಲಹುವ ಹೇ ಜನಾರ್ದನ॥ಪ॥ ಭಜಿಸುವೆನು ತವ ಚರಣ ಕಮಲವ। ಗಜವರಪ್ರದ ನೀಡು ಶುಭವನು॥ಅ.ಪ॥ ವೇದ ಸಾರವನೊರೆದ ಮಾಧವ, ಸುಜನ ಪಾಲ, ಮುಕುಂದ, ಕೇಶವ ಭಜಿಸುವೆನು ತವ ಚರಣ ಕಮಲವ ಗಜವರಪ್ರದ ನೀಡು ಶುಭವನು॥ಚರಣ॥

**ವರ್ಣಿಸಲೆನ್ನಿಂದ ತರವೇ ವೈಕುಂಠದರಸನ್ನಾ** **ರಾಗ:ಶ್ರೀ**

ವರ್ಣಿಸಲೆನ್ನಿಂದ ತರವೇ। ವೈಕುಂಠದರಸನ್ನಾ॥ ಹರಿಮಧುರೆಗೆ ಬಂದೆ। ಮಾವಾ ಕಂಸನ್ನಕೊಂದೆ। ಬೆಣ್ಣೆಗಳ ಕದ್ದು ತಿಂದಾ ಗೋಪಿಯೇ॥ .. ಕೈಲಿ ಪೆಟ್ಟು ತಿಂದೇ॥1॥ ಶ್ರೀರಾಮವತಾರಾ ದಶರಥನ ಕುಮಾರಾ। ರಾವಣನ್ನ ಸಂಹಾರಾ.... ಮನೋಹಾರಾ। ಭಕ್ತ ಜ್ಞಾನೋದ್ಧಾರಾ॥2.. ಹರಿ ಮಥುರೆಗೆ ಬಂದಾ। ವಾಲ್ಮೀಕಕ್ಕೆ ತಾ ಬಂದಾ। ಗುಟ್ಟಿನಿಂದಿರುವೋ ಚಂದಾ॥ ಲಕ್ಷ್ಮೀ ಇಲ್ಲದೆ ಬಹೂ ಚಿಂತಾಕ್ರಾಂತದಿಂದಾ॥3॥ ಗೆಜ್ಜೆ ಕಾಲ್ಗಳಲ್ಲಿ। ಘಲ್ ಘಲ್ ಶಬ್ದಗಳಿಂದ। ಕಾಳಿಂದಿ ಮಡುವಿಗೆ ಬಂದಾ। ಗೋಪಿಯೇರ ಕೂಡಿ ರಾಸಕ್ರೀಡಾಡುವುದು ಚಂದ॥4॥ ಕೂರ್ಮನ ಕುಟುಂಬ। ಕುಕ್ಷಿಯಲ್ಲಿಟ್ಟ ಚಿಂದ। ಕೊಂಡಾಗೆ ಒಲಿದುನಿಂದ ದಾಸವೆಂಕಟೇಶ ವಿಠಲ ನೇ ಚಂದಾ॥5॥

### ವರದಾ ಕಂಚಿವರದಾ — ರಾಗ: ಸಿಂಧುಭೈರವಿ, ಆದಿತಾಳ

ವರದಾ ಕಂಚಿವರದಾ ವರದಾ ನೀ ಪೊರೆಯೆಂದು। ಕರೆಯಲಾಕ್ಷಣ ಬಂದು ನೆರೆವೆ ಬಂದು ನೆರೆವೆ ಅಭಿಷ್ಟವಗರೆವೆ॥ಪ॥ ನಿರುತ ನಿನ್ನಯ ಚರಣ ಶರಣರ। ಪೊರೆವ ಕಾರ್ಯ ದುರಂಧರ ಸಿರಿ॥ಅ.ಪ॥ ಮಡುವಿನೊಳ್ ಮಕರಿ ಕಾಲ್ಪಿಡಿದ್ ಸೆಳೆಯೆ ಜನಸರಿಯೆ। ಜನ ಸರಿಯೆ ತುತಿಸಿ ನಿನ್ನ ಕರೆಯೆ। ಮಡದಿಯೊಡ ನುಡಿಯದಲೆ ಸಂಗಡ। ಎಡಬಲದವರ ಕಡೆಗೆ ನೋಡದೆ। ತಡೆಯದಲೆ ತಡಿಗೊದಗಿ ಕರಿಯಾ ತೊಡರ ಬಿಡಿಸಿದೆ ಕಡುದಯಾನಿಧೆ॥1॥ ತೊಡೆಯಿಂದ ನಡೆಯೆಂದು ನುಡಿದು ಕೆಡಹಿ ಧ್ರುವ ಮಿಡುಕೆ। ಧ್ರುವ ಮಿಡುಕಿ ಬಂದನು ನಿನ್ನ ಹುಡುಕೆ। ಪೊಡವಿಯಡಿ ಯುಂಗುಟದಲೊತ್ತುತ। ದೃಢ ವ್ರತದಿ ತಪಜಡಿದು ಮಾಡಲು। ತಡೆಯದಲೆ ನೀನೊಲಿದು ಶೀಘ್ರದಿ। ಕೆಡದ ಪದವಿಯನೊಡನೆ ನೀಡಿದೆ॥2॥ ಕಡುಬಾಧೆ ಬಡಿಸಿ ನಿನ್ನೊಡೆಯನೆಲ್ಲಿಹನೆಂದು ನುಡಿಯೆ ಎಂದು ನುಡಿಯೆ ಕಂಬವ ತೋರಿ ಜಡಿಯೆ। ಸಿಡಿಲಿನಂದದಿ ಘುಡು ಘುಡಿಸಿ ಕೆಂಗಿಡಿಗಳುಗುಳುತ ಹಿಡಿದು ಅಸುರನ। ಕೆಡಹಿ ಬಗೆಬಗೆದೊಡಲು ಭಂಗಿಸಿ ದೃಡಭಕುತನಂ ಗಡನೆ ಉಳುಹಿದೆ॥3॥ ಮುಡಿಪಿಡಿದೆಳೆತಂದು ನಡುಸಭೆಯಲಿ ಉಟ್ಟ ಉಡುಗೆ ಉಟ್ಟ ಉಡುಗೆ ಸೆಳೆಯೆ ಬಾಲೆ ನಡುಗೆ। ಒಡೆಯರೈವರ ದೃಢ ತಿಳಿದು ನಿ। ನ್ನಡಿಗಳಿಗೆ ಮೊರೆಯಿಡಲು ಪಾರ್ಥನ। ಮಡದಿಗಕ್ಷಯ ಉಡುಗೆ ತೊಡಿಸಿದ ಬಡವಬಲ್ಲಿದ ರೊಡೆಯಮಾನದ॥4॥ ಬಡತನದಲಿ ಭಂಗ ಬಡುತಲಿರಲು ವಿಪ್ರಮಡದಿ ವಿಪ್ರಮಡದಿ ಕಳುಹಲು ಬರೆದ್ಮಡದಿ। ಮಡದಿ ರುಕ್ಮಿಣಿಯೊಡನೆ ಪಾರ್ವನೆ। ಅಡಿಗಳಿಗೆ ಪೊಡಮಡುತ ತಂದೊ। ಪ್ಪಿಡಿಯ ಅವಲಿಯ ಕೊಡಲು ಭುಂಜಿಸಿ ಕಡು ಸಂಪದದ ಸಂಗಡಲೆ ನೀಡಿದೆ॥5॥ ಅಜಮಿಳ ವನದಲಂ ತ್ಯಜವಿವಸ್ತ್ರಳ ಕಂಡಂಗಜನ। ಕಂಡಂಗಜನ ಬಾಣಕೆ ಸಿಲುಕಿ ಸ್ವಜನ। ಯಜನ ಭಜನೆಯ ತ್ಯಜಿಸಿ ಕುಪ್ರಜೆ। ಸೃಜಿಸಿ ದ್ವಿಜನಿಗೆ ಕುಜರೆ ಬರೆ ಭಾನುಜನ ಪ್ರಜೆಗಳಿಗಂಜಿ ನಿಜ ಆತ್ಮಜನ ಕರೆಯಲು ದ್ವಿಜನ ಸಲುಹಿದೆ॥6॥ ಈ ಪರಿಯಲಿ ಬಲು ಆಪನ್ನ ಶರಣರ ಪೊರೆದೆ। ಶರಣರ ಪೊರೆದೆ ಸುಕೀರ್ತಿಯ ಮೆರೆದೆ। ಪಾಪಿ ನಾ ಬಲು ಎನ್ನ ಅವಗುಣ। ರಾಪುಮಾಡದೆ ನೀ ಪೊರೆಯೊ ಜಗದ್ವ್ಯಾಪಿ ಗುರುಗೋಪಾಲ ವಿಠಲ ದಯಾಪಯೋಬ್ಧಿಸುರಾಪಗಾಪಿತ॥7॥

### ವೃಂದಾವನದೊಳಗಾಡುವನ್ಯಾರೆ — ರಾಗ: ಸಿಂಧುಭೈರವಿ, ಆದಿತಾಳ

ವೃಂದಾವನದೊಳಗಾಡುವನ್ಯಾರೆ ಗೋಪಿ। ಚಂದಿರವದನೆ ನೋಡುವ ಬಾರೆ॥ಪ॥ ಅರುಣಪಲ್ಲವ ಪಾದಯುಗಳನೆ ದಿವ್ಯ। ಮರಕತ ಮಂಜುಳಾಭರಣನೆ॥ ಸಿರಿವರ ಯದುಕುಲ ಸೋಮನೆ ಇಂಥ। ಪರಿಪೂರ್ಣಕಾಮ ನಿಸ್ಸೀಮನೆ॥1॥ ಹಾರಹೀರಗುಣಧಾರನೆ। ದಿವ್ಯ ಸಾರ ಶರೀರ ಶೃಂಗಾರನೆ। ಆರಿಗಾದರೂ ಮನದೂರನೇ। ತನ್ನ ಸೇರಿದವರ ಮಾತ ಮೀರನೆ॥2॥ ಮಕರಕುಂಡಲ ಕಾಂತಿಭರಿತನೆ।ದಿವ್ಯ। ಅಕಳಂಕ ರೂಪ ಲಾವಣ್ಯನೆ॥ ಸಕಲರೊಳಗೆ ದೇವನೀತನೆ ನಮ್ಮ। ಮುಕುತೀಶ ಪುರಂದರವಿಠಲನೆ॥3॥

### ಶಾಲಿಗ್ರಾಮ್ ಸುನೋಜಿ (ಹಿಂದಿ) — ರಾಗ:ಸಾರಂಗ

ಶಾಲಿಗ್ರಾಮ್ ಸುನೋಜೀ ವಿನತೀ ಮೇರೀ। ಯಹ್ ವರ್ ದಾನ್ ದಯಾಕರ್ ಪಾವೂಂ॥ಪ॥ ಪ್ರಾತಃ ಸಮಯ್ ಉಠಿ ಮಜ್ಜನ್ ಕರ್ ಕೇ, ಪ್ರೇಮ ಸಹಿತ್ ಸ್ನಾನ್ ಕರಾವೂಂ। ಚಂದನ್ ಧೂಪ್ ದೀಪ್ ತುಲಸೀ ದಲ್, ವರಣ್ ವರಣ್ ಕೇ ಪುಷ್ಪ ಚಢಾವೂಂ॥1॥ ತುಮ್ಹಾರೇ ಸನ್ಮುಖ್ ನೃತ್ಯ್ ಕರೂಂ ಪ್ರಭು, ಘಂಟಾ ಶಂಖ್ ಮೃದಂಗ್ ಬಜಾವೂಂ। ಚರಣ್ ಧೋಯ್ ಚರಣಾಮೃತ್ ಲೇಕರ್ ಕುಟುಂಬ್‌ಸಹಿತ್ ವೈಕುಂಠ್ ಸಿಧಾವೂಂ॥2॥ ಜೋ ಕುಛ್ ರೂಖಾ ಸೂಖಾ ಘರ್ ಮೇ ಭೋಗ್ ಲಗಾಕರ್ ಭೋಜನ್ ಪಾವೂಂ। ಮನ್ ವಚನ್ ಕರ್ ಸೇ ಪಾಪ್ ಕಿಯಾ, ಜೋ ಪರಿಕ್ರಮಾ ಕೇ ಸಾಥ್ ಬಹಾವೂಂ॥3॥ ಐಸೀ ಕೃಪಾ ಕರೋ ಪ್ರಭು ಮುಝ್ ಪರ್ ಜಮ್ ಕೇ ದ್ವಾರೇ ಜಾನ್ ನ। ಮಾಧೋದಾಸ್ ಕೀ ವಿನತೀ ಯಹೀ ಹೈಂ ಹರಿದಾಸ್ ಕೋ ದಾಸ್ ಕಹಾವೂಂ॥4॥

**ಹದಿನಾಲ್ಕು ಲೋಕಕೆ ದಾತ** **ರಾಗ:ಸಿಂಧುಭೈರವಿ**

ಹದಿನಾಲ್ಕು ಲೋಕಕೆ ದಾತ। ಹರೀ ಪಾಂಡವರ ಮನೆದೂತ।।ಪ।। ಚತುರ ಹಸ್ತದಿಂದ ಎಂಜಲ ತೆಗೆವ ಅತಳುತ ಕಟ್ಟುತ ಪೊತ್ತು ಬಿಸುಡುವ। ಹಿತದಾಸೆಯ ನೀಲಾಂಬುಧಿ ಸುರಿದ। ಸತತ ಅಲಂಕೃತಿ ಅತಿಶಯದಿಂದಲಿ। ಸತತ ಸದನದಲಿ ಕೆಲಸಕೆ ಒದಗುವ।।1।। ಬರ್ಮ ಬೆಳ್ಳಿ ಬೆತ್ತಗಳನ್ನಿಡುವ। ಚರ್ಮಕೆ ದಾಳಗಳೊಮ್ಮೆ ಧರಿಸುವ। ನಿರ್ಮಲವಾಗಿ ಕುದುರೆ ತೊಳೆದು ತರುವ। ಪೆರ್ಮೆಯಿಂದಲಿ ಕಾದಿರುವ। ಧರ್ಮಾನುಜ ಹೊರಟಾಗ ರಥವತ್ತಾನೆ ನಡೆಸುವ।।2।। ಕಾಸು ಗೀಸು ಸಂಬಳವನು ಬಯಸನು। ಸಾಸಿರ ನಾಮದ ಒಡೆಯ ಶ್ರೀಯರಸ। ಸಾಸುವೆ ಕಾಳಷ್ಟಾಯಾಸವ ಏಣಿಸ। ಭಾಸುರ ಗುಣಗಣ ವಿಜಯ ವಿಠಲ ತನ್ನ। ಭಕ್ತರ ಬಳಿ ಬಹು ಸರಸ।।3।।

**ಕ್ಷೀರಸಾಗರದಲ್ಲಿ ಪವಡಿಸಿರುವ** **ರಾಗ: ಪುನ್ನಾಗವರಾಳಿ**

ಕ್ಷೀರಸಾಗರದಲ್ಲಿ ಪವಡಿಸಿರುವ ಹರಿಯೆ। ಶ್ರೀಲಕ್ಷ್ಮೀ ದೇವಿಯಿಂ ಸೇವಿಪ ದೊರೆಯೆ।।ಪ।। ಮುಕ್ಕೋಟಿ ದೇವರು ಬಗೆಬಗೆಯಿಂ ಸ್ತುತಿಸಿರೆ। ಸಾನುರಾಗದಿ ಅವರ ಮನವಿಯಂ ಆಲಿಸಿದೆ। ಧರ್ಮರಕ್ಷಣೆಗಾಗಿ ಅವತರಿಸುವೆನೆಂದೆ। ಮತ್ತೆ ಮತ್ತೆ ಅವತರಿಸಿ ಜಗವನುದ್ಧರಿಸಿದೆ।।1।। ನಿನ್ನ ನಾಭಿಯಿಂ ಬ್ರಹ್ಮನುದಯಿಸಿದನು। ನಾಲ್ಕು ವೇದಗಳನು ಜಗಕೆ ನೀಡಿದನು। ಸೃಷ್ಟಿಯ ಹೊರೆಹೊತ್ತು ಸೃಷ್ಟಿಕರ್ತನಾದನು। ಅಂಡಪಿಂಡ ಬ್ರಹ್ಮಾಂಡ ಲೋಕವ ಸೃಜಿಸಿದನು।।2।। ಬಗೆಬಗೆಯ ಆಹಾರ ದಯಪಾಲಿಸಿದೆ ನೀನು। ಪಶುಪಕ್ಷಿ ಜೀವಿಗಳ ಪೋಷಿಸಿದೆ ನೀನು। ಕರುಣಾಸಮುದ್ರ ನೆಂಬ ಕೀರ್ತಿಯಪಡೆದೆ। ಚೈತನ್ಯದಾಸನಿಗೆ ಸುಖವೀವೆ ನೀನು।।3।।

## ಭಕ್ತಿಗೀತೆ

**ಆನೆ ಬರುತಿದೆ ನೋಡಮ್ಮಮ್ಮಾ** **ರಾಗ:ಸಾರಂಗ್**

ಆನೆ ಬರುತಿದೆ ನೋಡಮ್ಮಮ್ಮಾ। ನಗುತಾನೆ ಬರುತಿದೆ ನೋಡಮ್ಮಮ್ಮ।।ಪ।। ಜಗವ ರಕ್ಷಿಸಿದಂಥಾ ಜಗ್ಗಾನೆ। ಮಗುವ ಪಾಲಿಸಿದಂಥ ಮರಿಯಾನೆ।। ಖಗವಾಹನನೆಂಬೊ ಕರಿಯಾನೆ। ಅಗಣಿತ ಮಹಿಮನೆಂದೆನಿಸಿ ಮೆರೆವೋ ಮುದ್ದು।।1।। ರಕ್ಕಸರನೆ ಕೊಂದ ಸೊಕ್ಕಾನೆ। ಮುಕ್ಕಣ್ಣನಿಗೆ ಪ್ರಿಯ ಮುದ್ದಾನೆ। ಚಕ್ರವ ಪಿಡಿದಿಹ ಚೆಲುವಾನೆ। ಅಕ್ಕರದಿಂ ಗೋಪಿಗೆ ಬಾಲ ಲೀಲೇಯ ತೋರ್ದನೆ।।2।। ನಾಟಕ ಧರನೆಂಬೋ ನಲಿವಾನೆ। ಕೋಟಲೆ ಪಿಡಿಸುವ ಕಳ್ಳಾನೆ। ಚೇಷ್ಟೆಯಿಂದಾಡುವ ಚೆಲುವಾನೆ। ಮೇಲೆನಿಸಿಯೆ ಮಾನವರ ಜರೀಯುವಂಥ।।3।।

**ಆನೆ ಬಂದಿತೊಂದಾನೆಯು** **ರಾಗ: ಬೇಹಾಗ್**

ಆನೆ ಬಂದಿತೊಂದಾನೆಯು।।ಪ।। ಕ್ಷೀರಸಾಗರವ ಹೊಂದಿರುವ ದಿವ್ಯಾನೆಯಂತೆ ನವನೀತ ಚೋರದಾನೆ। ವಾರಿಜ ಮುಖಿಯರು ಒಲಿಯಲು ತಕ್ಕಾನೆ। ಕಾರುಣ್ಯ ನಿಧಿಯೆಂಬೊ ಕಡುಚೆಲ್ವಿನಾನೆ।।1।। ದುಷ್ಟರ ನಿಗ್ರಹ ಮಾಡತಕ್ಕಾನೆ। ಸೃಷ್ಟಿಲಿ ಪರಿಪಾಲಿಸುವ ಆನೆ । ಹೊಟ್ಟೆಯಲೀರೇಳು ಜಗವನೆ ಬಿಟ್ಟಾನೆ। ಬೆಟ್ಟವನೆತ್ತಿದ ಪುಟ್ಟ ಮದ್ದಾನೆ।।2।। ಮಧುರೆಯಲ್ ಮಾವನ ಮಡುಹತಕ್ಕಾನೆ। ಪದವ ನಂಬಿದವರ ಪಾಲಿಸುವಾನೆ। ಹೆದರದಿರೆಮ್ಮ ಮಂಗಳವೆಂಬೊ ಮುದ್ದಾನೆ। ಮದನ ಪಿತ ಮಂದಹಾಸದಾನೆ।।ಆನೆ।।3।।

**ಆನೆ ಬಂದಿತು ನೋಡಬನ್ನಿ** **ರಾಗ: ಬೇಹಾಗ್**

ಆನೆ ಬಂದಿತು ನೋಡಬನ್ನಿ ರಾಜಬೀದಿಯಲಿ। ಸುಮ್ಮಾನದಿಂದ ಸೊಂಡಿಲ ತೂಗುತಾಡು ತಾಡುತ।।ಪ।। ಅಡಿಗಡಿಗಾಡುತ ಸೊಂಡಿಲ ತೂಗುತ। ಬೆಡಗಿನ ಆನೆಯು ಬಂದಿತು ನೋಡು।।1।। ದೇವೇಂದ್ರನಾನೆಯು ರಾಜನ ಆನೆಯು। ಕಮಲದಪೂ ಸಹಿತ ಬಂದಿತು ನೋಡು।।2।।

**ಆನೆ ಬಂತೊಂದಾನೆ ಎಂದು ಕೃಷ್ಣನ ಕರೆ** **ರಾಗ:ಹಂಸನಾದ**

ಆನೆ ಬಂತೊಂದಾನೆ ಎಂದು ಕೃಷ್ಣನ ಕರೆ ಪಿಡಿದು ಆಡಿಸಿದಳಂದು ಗೋಪಿ॥ಪ॥ಮೊಲೆಯುಂಡು ಬಾಲ್ಯದಲಿ ಪೂತನಿಯ ಕೊಂದಾನೆ। ಮಲೆತ ವೃಷಭಾಸುರನ ಮದವಡಿಸಿದ ಆನೆ। ಛಲದಿ ತೃಣ ಧೇನುಕರ ಕುಲವ ಸಂಹರಿಸಿದಾನೆ। ಒಲಿದು ಶಕಟಾಸುರನ ಒಲುಮೆಯನು ಮುರಿದಾನೆ॥1॥ ಕಣ್ಣಾ ಮುಚ್ಚಾಲೆಯನಾಡಿ ಖಳರ ಸಂಹರಿಸಿದಾನೆ। ಚಿಣ್ಣರೊಳು ಗೋಕುಲಕೆ ತೆರಳಿದ ಆನೆ। ಬೆಣ್ಣೆಯನು ಕದ್ದು ಪಾಲ್‌ಬೆಣ್ಣೆಗಳನು ಮೋಹಿಸಿದಾನೆ। ಅಣ್ಣರೊಳು ಗೋಕುಲಕೆ ಆನಂದದೀ ಪೋದಾನೆ॥2॥ ರಜಕನ ಕೊಂದು ಮಡಿಯುಟ್ಟು ತೆರಳಿದ ಆನೆ। ತ್ರಿಜಗವರಿಯಲು ಕುಟ್ಟಿ ಎತ್ತಿದ ಆನೆ। ನಿಜಕಂಸನನೆ ಕೊಂದು ತಾತಗ್ವರವಿತ್ತಾನೆ। ದಿಗ್ವಿಜಯದಿಂದ ಕನಕಗಿರಿ ನರಸಿಂಹನೆನಿಸಿದಾನೆ॥3॥

**ಇನ್ರು ನಾನ್ ಕಣ್ಣಂಡೆ ರಾಧಿಕೆಯಾಯ್ (ತಮಿಳು)** **ರಾಗ:ಸಾರಂಗ**

ಇನ್ರು ನಾನ್ ಕಣ್ಣಂಡೆ ರಾಧಿಕೆಯಾಯ್। ಎಲ್ಲಾಂ ಮರಂದು ಅವನಿಲ್ ಐಕ್ಯಮಾಯ್॥ಪ॥ ಗೋಕ್ಕಳುಂ ಪೂಕ್ಕಳುಂ ಬೃಂದಾವನಮುಂ। ಕುಂಜ ಕುಟೀರತ್ತೈ ಇನ್ರು ನಾನ್ ಕಂಡೇನ್॥1॥ ಮಥುರಾ ವೀದಿಯುಂ ಯಮುನಾ ತೀರಮುಂ। ಮೋಹನ ಮುರಳಿಯುಂ ಸಖಿ ಇನ್ರು ಕಂಡೇನ್॥2॥ ಶಾಂತಂ ಗಂಭೀರಂ ಸುಂದರಂ ಮನೋಹರಂ। ಮಾಧವ ಸಮೀಪಂ ಎನ್ರುಂ ಸೌಖ್ಯಪ್ರದಂ॥3॥

**ಉಡುಪಿಯ ಕೃಷ್ಣನ ನೆನೆದರೆ**

ಉಡುಪಿಯ ಕೃಷ್ಣನ ನೆನೆದರೆ ಮನದಲಿ ಏನೋ ಆನಂದ॥ಪ॥ ಬಯಸಿದ ಆಸೆಗಳೆಲ್ಲವು ಫಲಿಸೆ। ನಲಿಯುವೆ ಮನವೆ ಮುದದಿಂದ॥ಅ.ಪ॥ ದೇವಕಿ ನಂದನ ನಂದರ ಕಂದ। ಪೂಜಿಸಿ ಭಜಿಸುವ ತಾವಲೆ ಇರುವ। ದೀನ ಜನರ ಮೊರೆ ಕೇಳಿ ಪರಸುವ। ಉಡುಪಿ ಗೋಪಾಲನು ಶ್ರೀಕೃಷ್ಣನು॥1॥ ಅಷ್ಟಮಠಗಳ ಶ್ರೇಷ್ಠಯತಿಗಳ। ಪೂಜೆಗೊಳ್ಳುವ ಪುರುಷೋತ್ತಮ। ದೇವ ಮುನಿಗಳು ಅನುಗಾಲ ನುತಿಸುವ। ಉಡುಪಿ ಗೋಪಾಲನ ಕೊಂಡಾಡಿರೋ॥2॥

**ಓಡಿವರುವಾನ್ ಕಣ್ಣನ್ (ತಮಿಳು)** **ರಾಗ: ಮಾಂಡ್**

ಓಡಿವರುವಾನ್ ಕಣ್ಣನ್ ಓಡಿವರುವಾನ್। ಅವನ್ನೈ ನಾಡಿ ಭಜಿಪ್ಪೋಮಾನಾಲ್ ತೇಡಿವರುವಾನ್॥ಪ॥ ನಂಬಿದ ಯಶೋದೈಕ್ಕು ಬಾಲನಾನಾನ್ ಅವನ್ನೈ। ನಂಬಾದ ಕಂಸನಕ್ಕು ಕಾಲನಾನಾನ್॥1॥ ನಂಬಿಯ ಪ್ರಹ್ಲಾದನುಕ್ಕು ಪರಮಮ್ ಆನಾನ್ ಅವನ್ನೈ ನಂಬಾದ ಹಿರಣ್ಯನುಕ್ಕು ಸಿಂಹನಾನಾನ್ ನರಸಿಂಹನಾನಾನ್॥2॥ ಭಕ್ತ ಪಾಂಡವರುಕ್ಕು ದೂತನಾನಾನ್ ಅವನ್ನೈ ನಂಬಾದ ದುರ್ಯೋಧನನಕ್ಕು ವೈರಿಯಾನಾನಾನ್॥3॥

**ಕಮಲದಳ ನೇತ್ರನು ಈತ ಕಾಮನ್ನ (ಹರಿಹರಸ್ತುತಿ)** **ರಾಗ:ಕಾಮವರ್ಧಿನಿ**

ಕಮಲದಳ ನೇತ್ರನು ಈತ ಕಾಮನ್ನ ದಹಿಸಿ ಗೆಲಿದು ಧರಿಸಿದನು ಆತ॥ ಕಮಲ ಮುಖಿಯರೊಡನೆ ನಲಿದು ಕರುಗಳ ಕಾಯ್ದವನೀತ। ಸಮರದಿಂದರ್ಜುನಗೆ ಮೆಚ್ಚಿ ಪಾಶುಪತಾಸ್ತ್ರವನಿತ್ತವನಾತ॥1॥ ಸುರಮುನಿಜನರಿಗೆ ಸುಖಗಳ ತೋರಿಸಿ। ನರರ ಕೈಯ್ಯಲಿ ಪೂಜೆಗೊಂಬುವ ಈತನು॥ ಉರಿಯ ಹಸ್ತವನೆತ್ತಿ ಅಸುರರ ಬಾಧೆಗೆ। ಭಯದಿಂದೋಡಿದ ಪರಶಿವನಾತ॥ ಈತನೇ ಹರಿಗೋವಿಂದನು॥ ಜನರೆಲ್ಲ ಕೇಳಿ ಆತನೇ ಮಹದೇವನು॥2॥ ರಾಕ್ಷಸರನು ಸಂಹರಿಸುವನು ಈತ। ಜಗದೀಶನಾಗಿ ಹಸ್ತಿಚರ್ಮವ ಪೊದ್ದವನು ಆತ। ಕಸ್ತೂರಿ ತಿಲುಕವ ರಚಿಸಿ ಬಹು ಶಿಸ್ತುಗಾರನಾದವನೀತ। ಮತ್ತೆ ಗೌರಿದೇವಿಗೆ ಒಲಿದ ಮುದ್ದು ಹರಲಿಂಗ ಆತ॥3॥ ಸಜ್ಜನರನು ಪರಿಪಾಲಿಪನೀತನು। ದುರ್ಜನರಿಗೆ ವರವ ಕೊಡುವವನಾತನು। ಹಕ್ಕಿಯನೇರಿ ಮೆರೆಯುವನೀತನು। ತನೊಂದ್ದಿದ್ದವರ ಬಹುಬೇಗ ಸಲಹುವನಾತನೂ॥4॥ ಪಾಂಡವರ ಪರಿಪಾಲಿಪನು ಆತ। ಜಗದೀಶನಾಗಿ ಅಂಧಕಾಸುರನ ಕೊಂದವನೀತನು। ಅಂಡವನೆಳೆದು ತ್ರೈಲೋಕ್ಯ ವಿಕ್ರನಾದವನೀತ॥5॥ ಚಂದ್ರನ ಶಿರದ ಮೇಲೆ ಹೊತ್ತು ಮೆರೆಯುವನಾತ। ಗಂಗೆಯ ಪಾದದಿ ಪಡೆದಿಹನೀತನು।

ಗಂಗೆಯ ಜಡೆಯಲಿ ಧರಿಸಿಹನಾತನು।। ರಂಗನಾಥನಾಗಿ ಮಲಗಿಹನೀತನು. ಗಂಗಾಧರನಾಗಿ ನೆಲಸಿಹನಾತನು।।6।। ಎನುತಲೀ ಪರಿ ಸ್ತುತಿಯನು ಮಾಡುತ್ತ। ಭಕ್ತರುಗಳ ಕರುಣ ದೃಷ್ಟಿಯಿಂದ ನೋಡುತ್ತ। ವಿನಯವಾದ ನುಡಿಗಳಿಂದ ಮಧುರವಾಕ್ಯಗಳನ್ನೇ ತೋರುತ್ತ। ಹರಿಹರಾರು ದರ್ಪಣ ತೇಜದಿ ಜಗದೊಳಗೆ ರೂಪವ ತೋರುತ।।7।। ಸಿರಿಯರಸನ ದಿವ್ಯ ಚರಣವ ನೆನೆಯುತ। ಹರನ ಚರಿತ್ರೆಯನು ಅನುದಿನ ಪೊಗಳುತ। ಸಿರಿಯರಸನ ಪಾಡುತ ಪೊಗಳುತ। ಶಿವಸ್ತುತಿ ವಚನವ ಮನದಿ ಭಜಿಸುತ।।8।। ಜಯಜಯ ಜಗನ್ನಾಯಕ ಜಾಹ್ನವಿ ಜನಕನೇ। ಭಯ ನಿವಾರಣ ಸದ್ಗುಣ ಮೂರ್ತಿಯೇ। ಜಯ ಜಯ ಹರಶಂಕರನೆ ಅಘಪಾಪ ವಿನಾಶನೇ। ಜಯಜಯ ದಾಸರಕೂಟಕೆ ಚೆಲುವನಾಗಿ ನೆಲಸಿದನೆ।।9।। ಜಯಗಣ ಕೂಟದಿ ರಾಜಿಸುತಿಹನೇ। ಜಯ ಶಂಕರನಿಗೆ ಪ್ರಿಯನಾದವನೇ। ಅಗಣಿತ ಕೂಟದಿ ರಾಜಿಸುತಿಹನೇ। ಜಯ ಶಂಕರನಿಗೆ ಪ್ರಿಯನಾದವನೇ ಅಗಣಿತ ಪದವಿಯ ಸುಖದಿ ತೋರುವನೆ। ಜಯ ಶಂಕರನೇ ಜಯ ಗೋವಿಂದನೇ।।10।।

**ಕಂಡೇ ಹರಿಯ ಕಂಡೇ** **ರಾಗ: ಕಲ್ಯಾಣಿ**

ಕಂಡೇ ಹರಿಯ ಕಂಡೇ....। ಕಂಡೆ ಹರಿಯ ಕಂಡೆ....।। ದೇವಾದಿ ದೇವನ ದಿವ್ಯಾನುಭಾವನ। ಕಂಡೆ.... ಹರಿಯ ಕಂಡೆ।। ಶಂಖ ಚಕ್ರ ಗದೆ ಶಾರ್ಙ್ಗವ ಧರಿಸಿದ। ಪಂಕಜ ವದನದಿ ಅಜನನು ಮುಡಿದಿಹ। ರತ್ನ ಕೀರಿಟದ ತೇಜೋ ಮಂಡಲ। ಕನಕಾಂಬರಧರ ಕೌಸ್ತುಭಹಾರನ।।1।। ನಖದೊಳು ಶಕ್ರನ ಅಡಿಯೊಳು ಶಕ್ರನ। ಕಟಿತಟ ಸೂತ್ರನ ನಟನಾಚಾರ್ಯನ। ದ್ಯಾವಾ ಪೃಥವಿಯ ದಿವ್ಯದಿಗಂತನ। ಸಿತ ಸಿರಿಲೋಲನ ಶ್ರೀ ಭಗವಂತನ।।2।।

**ಕ್ರೀಡತಿ ವನಮಾಲಿ ಗೋಷ್ಠೇ** **ರಾಗ: ಸಿಂಧುಭೈರವಿ, ಆದಿತಾಳ**

ಕ್ರೀಡತಿ ವನಮಾಲಿ ಗೋಷ್ಠೇ।।ಪ।। ಪ್ರಹ್ಲಾದ ಪರಾಶರ ಪರಿಪಾಲೀ। ಪವನಾತ್ಮಜ ಜಾಂಬವದನುಕೂಲೀ।। ಪದ್ಮಾಹೃತ್ ಪರಿರಂಭಣಶಾಲೀ। ಪಟುತರ ಶಾಸಿತಮಾಲಿ ಸುಮಾಲೀ ।। ಪರಮಹಂಸ ವರಕುಸುಮ ಸುಮಾಲೀ। ಪ್ರಣವ ಪಯೋರುಹ ಗರ್ಭಕಪಾಲೀ।।

**ಗೋವಿಂದ ಗೋಪಾಲ ಮುಕುಂದ ಶೌರೇ** ರಾಗ:ಭೂಪಾಲ್-ಏಕತಾಳ

ಗೋವಿಂದ ಗೋಪಾಲ ಮುಕುಂದ ಶೌರೇ। ಮಾಧವ ಹರಿನಾರಾಯಣ।।ಪ।। ನಂದಕಿಶೋರ ಜಗದೋದ್ಧಾರ। ನಾರಾಯಣ ಅವತಾರ। ಕರುಣಾನಿಧಿ ಮಂದಾರ।।ಅ.ಪ।। ಪದ್ಮನಾಭ ಪುರುಷೋತ್ತಮ ಶೌರೆ। ವಾಮನ ಮಾಧವ ಗೋವಿಂದ। ವೈಕುಂಠ ಮಾಧವ ಭಕ್ತೋದ್ಧಾರ। ಭವಭಯಭಂಜನ ಗೋವಿಂದ। ನವಮಣಿ ಹಾರ ಗೋವಿಂದ।।1।।

**ಚೆಲುವು ನೋಡಮ್ಮ ಚೆಲುವು**

ಚೆಲುವು ನೋಡಮ್ಮ ಚೆಲುವು। ನಮ್ಮ ಉಡುಪಿ ಕೃಷ್ಣನ ಚೆಲುವು।। ಸುಂದರ ವದನ ಅರವಿಂದ ನಯನ। ದೇವಕಿ ನಂದನ ಆನಂದ ಕಂದನ।।ಪ।। ಒಂದು ಕೈಯಲಿ ಕಡಗೋಲ ಹಿಡಿದು। ಒಂದು ಕೈಯಲಿ ವೇಣುವ ಹಿಡಿದು। ಬಾಲಕನಂದದಿ ನಗುತಲಿ ನಿಂತ। ಕೌಪೀನ ಧಾರಿ ಕೃಷ್ಣ ಮುರಾರಿ।।1।। ಗೋಪಿಯರಾ ಮನಸೆಳೆದಾ ಪೋರ। ಗೋಕುಲದಿ ಹರಿಸಿ ಆನಂದ ಧಾರ।। ಗೋಪಾಲ ಕೃಷ್ಣ ನಂದಕಿಶೋರ। ಗೋವಿಂದ ಶ್ರೀಹರಿ ನವನೀತ ಚೋರ।।2।।

**ಜಗದೀಶ ಹರೇ ಪರಿಪಾಲಿಸೈ** **ರಾಗ:ಕನದಕುತೂಹಲ**

ಜಗದೀಶ ಹರೇ ಪರಿಪಾಲಿಸೈ। ವಾಸುದೇವ ದೇವೇಶ್ವರ।।ಪ।। ದಯೆತೋರು ನೀಂ। ಕರುಣಾಕರ। ಸುರವಂದ್ಯ ರಮೇಶ ವಿಭೊ।।ಗೋವಿಂದ।।ಅ.ಪ.।। ಕರುಣಾಕರ ಕಾಯೊ ಮಾಧವ। ಕ್ಷಮಿಸಯ್ಯ ಎನ್ನ ಅಪರಾಧವ।।1।। ಸನಕಾದಿ ಸನ್ಮುನಿ ವಂದಿತ। ಸುಖ ಶಾಂತಿಯ ನೀಡುನೀಂ।।2।।

**ಜಯ ನಂದಲಾಲಾ ಜೈ 2 ಗೋಪಾಲ (ಹಿಂದಿ)** **ರಾಗ: ಕಲ್ಯಾಣಿ**

ಜಯ ನಂದಲಾಲಾ ಜೈ ಜೈ ಗೋಪಾಲ। ಮಾಧವ ಮೋಹನ ಮುಕುಂದ ಮುರಾರಿ॥ ದೇವಕಿ ನಂದನ ಕೃಷ್ಣ ಕನ್ಹೈಯ್ಯ। ಜುಗಲ್ ಕಿಶೋರ್ ಶ್ಯಾಮ ಗಿರಿಧಾರಿ॥ ಮೋರ್ ಮುಕುಟಧಾರಿ। ಸಾವರಿಯ ತುಮಹೋ॥ ಮಾತಾ ಯಶೋಧ ಕಹತೀ ಮಕ್ಖನ್ ಚೋರ್। ತೂ ಐಸಾ ನಟ್ ಖಟ್ ಚೋರ್॥ ಚೋರ ಕಲಾ ಸಂಪೂರ್ಣ ಹೋ ತುಮ್। ಕಂಸ ಸಂಹಾರಿ ಲೀಲಾ ಪ್ಯಾರಿ। ಕೋಟಿ ಕೋಟಿ ನಾಮ್ ತಿಹಾರಿ। ಅಪರವತಾರ್ ಅಪನೇ। ತುಮಹೀ ಜಾನೇ ಕ್ಯಾಜಾನೆ ಸಂಸಾರ್॥ ತೀನ್ ಲೋಕ್ ಕೇ ಸ್ವಾಮಿ ತುಮಕೋ। ಸುಮರನ್ ಕರನೇ ತಬ್ ಸಂಸಾರ್॥

**ತೇರನೇರಿ ಬಂದ ಗೋವಿಂದ** **ರಾಗ:ಬೃಂದಾವನಿ**

ತೇರನೇರಿ ಬಂದ ಗೋವಿಂದ। ಬೀರುತಾನಂದದಿಂದ। ಚಂದದಿಂದ ಅಂದು ಮುಕುಂದ॥ಪ॥ ರಾರಾಜಿಪ ಮಣಿ ಖಚಿತ ಕಿರೀಟ। ಕಲಶ ಪೊರೆವ ಸಾಮ್ರಾಟ। ತೇಜ ಬೀರುತ।ಕಸ್ತೂರಿ ತಿಲಕ ಲಲಾಟ। ದಯೆ ತುಂಬಿದ ನೋಟ। ನೈಜವಾದ ಕನಕಾಂಬರವನು ಪೊದೆ। ದೀ ಜಗದೊಡೆಯ ಸರೋಜಭವನಪಿತ॥1॥ ಎಡಬಲದಡಿಗಡಿ ಜಡಿವ ಚಾಮರಗಳು। ಪೊಡೆವಿಯ ಸುರರೀ ಕಡೆ। ಗಡಣದೊಳೆಡೆಬಿಡದೆಲೆ ನುಡಿಯುವ ವೇದಗಳು। ಕಡು ಸಡಗರದಿಂದಲಿ ಹೊಡೆವ ಮೃದಂಗ। ಧ್ವನಿತ ನಿಖಿಲವಾದ್ಯಗಳು। ಜಲದಿಶಯನ ಸಿರಿ। ಮಡದಿಯ ಗಂಡನೆ। ಕಡು ಮದ ವೆಂದಡಿ। ಗಡಿಗೆ ಮೊರೆ ಇಡುತಿರೆ॥2॥ ಸಾಮಗಾನಲೋಲ ಪೊರೆ ಶ್ರೀರಾಮ ಭೂಮಿ ಪಾಲ। ಕ್ಷೇಮದಿಂದ ಸುಗ್ರಾಮ ನಂದಿತ ಸುನಾಮ। ಎಂದು ಜನಸ್ತೋಮ ಹಾಡಲು ತೀವಿದ ಮುದವನು। ಹಾಡಲು ಠೀವಿಲಿ ತೋರಿಸಿ। ಜೀವಕೋಟಿಗಳ ಕಾವುದಕೋಸುಗ ಶ್ರೀ ವನಿತಾ ರಾಜೀವನಯನೆಯರು ಸೇವಿಸುತಿರೆ ಸುಗ್ರಾಮ ಪುರಾಧಿಪ॥3॥

**ದಯಮಾಡೋ ದರ್ಭಶಯನ** **ರಾಗ:ಕಲ್ಯಾಣಿ**

ದಯಮಾಡೋ। ದರ್ಭಶಯನ। ಆನಂದ ಮುಕುಂದ ಗೋವಿಂದ ಸದಾನಂದ॥ಪ॥ ಸಾರಸಾಕ್ಷ ಭವ। ಘೋರ ಕಲುಶ ವರ ಭೂರಿ ದನುಜವರ। ತಿಮಿರ ಹರ। ಸದಾ ಪೊರೆಯೊ ಗರುಡ ತುರಂಗ। ನೀಲಾಂಗ ಶುಭಾಂಗ ಕೃಪಾಪಾಂಗ॥1॥ ಅಕ್ಷಯಾಶ್ರಿತ ಪಕ್ಷಿವಾಹನ।ಇಷ್ವಾಕುಪಿತ ಲಕ್ಷ್ಮೀನಾಥ। ಪಕ್ಷ ಪಾತವ ಗೈಯದೀಕ್ಷಿಸಿ ರಕ್ಷಿಸಯ್ಯ ನೀ ಮೋಕ್ಷದಾತ॥2॥ ಭಾಸುರಾಂಗ ಭವನಾಶನ ಶುಭಕರ ವಾಸುಕಿಶಯನ। ಕರದಿ ಶತಧರ ಸಾಸಿರ ವಂಶದ ನಳಿನ ಕೃಪಾಕರ ಆನಂದ ಮುಕುಂದ ಗೋವಿಂದ ಸದಾನಂದ॥3॥

**ದೇವ2 ದೀನಪಾಲ ಗೋವಿಂದ** **ರಾಗ: ರಂಜನಿ, ರೂಪಕತಾಳ**

ದೇವ ದೇವ ದೀನಪಾಲ ಗೋವಿಂದ ಕೃಷ್ಣ। ದೇವಕೀ ವಸುದೇವ ಬಾಲ ಗೋವಿಂದ ಕೃಷ್ಣ॥ಪ॥ ಜಯ ಗೋವಿಂದ ಕೃಷ್ಣ॥2ಸಾರಿ॥ ಶಕಟ ಧ್ವಂಸ ದಿವ್ಯಪಾದ ಗೋವಿಂದಕೃಷ್ಣ। ಶಂಖುಚಕ್ತ ಗದಾಧಾರಿ ಶ್ರೀ ಗೋವಿಂದ ಕೃಷ್ಣ। ಜಯ ಗೋವಿಂದಕೃಷ್ಣ॥1॥ ಪಂಕಜಾಕ್ಷ ಪದ್ಮನಾಭ ಗೋವಿಂದ ಕೃಷ್ಣ। ಪಾದಕಮಲಂ ಶರಣಂ ಶರಣಂ ಗೋವಿಂದಕೃಷ್ಣ। ಜಯ ಗೋವಿಂದ ಕೃಷ್ಣ॥2॥

**ನೀನೇ ವರ ಮಾಧವಾ**

ನೀನೇ ವರ ಮಾಧವಾ... ಭಕ್ತಾಮೋದಕ ಸಾರ। ನೀನೆ ವಾಸುದೇವಹರೀ। ಭಾಸಮಾನಪರಿಪೋಷಿಸೆನ್ನಶೌರೀ॥ಪ॥ ವಾಸವಾರ್ಚಿತ ಸುಪಾದದುರಿತಹಾರಿ॥ ಉದಾರಿ ನೀನೇ ವರಮಾಧವಾ। ಭಕ್ತಕಲ್ಪತರು। ಮುಕ್ತಿ ದಾತ ಗುರು। ಯುಕ್ತಿ ನಿನಗೆ ನೂರು। ಶಕ್ತಿಧಾತ ಸರ್ವೇಶನ ಹಿತನಾರು॥1॥ ಅದಾರು ನೀನೇ ವರಮಾಧವ ಸಾಲಿಗ್ರಾಮಪುರ। ಪಾಲಧೀರಸುರ। ಜಾಲವಂದ್ಯಾ ಶೂರ। ಬಾಲ ಭಾಸ್ಕರಸುತೇಜ ನಮಿತನಾರು। ಆಧಾರ ನೀನೇ ವರಮಾಧವಾ॥2॥

**ಬಂದಾ ರುಕ್ಮಿಣಿ ಲೋಲ** **ರಾಗ:ಶ್ರೀ**

ಬಂದಾ ರುಕ್ಮಿಣಿ ಲೋಲ, ಗೋಪಾಲಾ। ನಂದ ತುಳಸಿ ಮಾಲ ಗೋವಿಂದಾ। ನಂದ, ದೇವಕಿ ಕಂದ।।ಪ।। ಇಂದು ವದನೆಯರು ಚಂದ ಕರೆಯಲು ನಂದನ ಕಂದ ಮುಕುಂದಾ। ಗೋವಿಂದ ಬಂದ।।1।। ಭವಭಯಹರಣ ಬಹು ಗಂಭೀರ। ಅವನಿಯ ಸಲಹಿದ। ಅಸುರ ಸಂಹಾರ। ವಿವರಿಸಿಲಾದುದೆ ಇವನ ಗಂಭೀರಾನ। ಗೋವಿಂದ ಮುಕುಂದ।।2।। ವನಜ ಸಂಭವನ ಪಿತ ಹರಿ ಮಹಾಗಾರುಡಿಗಾರ। ವನಜ ನಯನ ಕರಿವರದ। ಭುಜಂಗ ಘನತರ ಮೋಕ್ಷವ ಕೊಡುವ। ಮುಕುಂದಾ ಗೋವಿಂದಾ।।3।। ನಾರದ ವಂದಿತಾ ನಗುಮುಖದಿಂದ। ನಾರಿಯರೆದುರಲೀ ನಲಿಯುತಾ ನಿಂದಾ। ಬಾರೆಂದು ಬೇಡುವ ಭಕ್ತರಿಗಾನಂದ। ನೀಡುತಲೀ ನಿಂದಾ ಗೋವಿಂದಾ।।4।।

**ಮೇಲುಕೋಟೆಯಲ್ಲಿರುವ ಚೆಲುವನಾರಾಯಣನೆ** **ರಾಗ:ಕಲ್ಯಾಣಿ**

ಮೇಲುಕೋಟೆಯಲ್ಲಿರುವ ಚೆಲುವನಾರಾಯಣನೆ। ನಿನ್ನ ಚೆಲುವಿಗೆ ನಾವು ಮನಸೋತೆವು। ರಮ್ಯ ಪ್ರಕೃತಿಯ ನಡುವೆ ನೀನಿರಲು ದೇವನೆ। ನಿನ್ನ ಪಾದಕೆ ನಾವು ಶರಣಾದೆವು।।1।। ಜಗದ ಚೆಲುವೆಲ್ಲವು ನಿನ್ನಲ್ಲಿ ತುಂಬಿರಲು। ಚೆಲುವ ಚೆನ್ನಿಗರಾಯ ನೀನು ಹರಿಯೆ। ಜಗವ ರಕ್ಷಿಸಲೆಂದು ನೀನಿಲ್ಲಿ ಬಂದಿರಲು। ನಿನ್ನ ನೆಚ್ಚಿದೆವಯ್ಯ ನಾವು ಹರಿಯೆ।।।2।। ವೇದಘೋಷದ ನಡುವೆ ಪೂಜೆ ನಡೆಯುತ್ತಿರಲು। ನೋಡಲೇನಾನಂದ ವೇದಾಂತ ಸಾರ। ಹಾಲಿನಭಿಷೇಕವ ನಿನಗೆ ಮಾಡುತ್ತಿರಲು। ಹಾಲಂತೆ ನಗುತಿರುವೆ ಚಿತ್ತ ಚೋರ।।3।। ವೈರ ಮುಡಿಯನು ಧರಿಸಿ ವೈಭವದಿ ನೀನಿರಲು। ವೈಕುಂಠವೇ ಧರೆಗೆ ಬಂದ ಹಾಗೆ। ಧೂಪ ದೀಪದ ನಡುವೆ ನಿನ್ನ ಮುಖ ಮಿಂಚಿರಲು। ನಮ್ಮೆದುರು ನೀ ಬಂದು ನಿಂತಹಾಗೆ।।4।।

**ಮೋರ್ ಬೋಲೆ ಚಕೋರ್ ಬೋಲೆ (ಹಿಂದಿ)** **ರಾಗ: ಮೋಹನ**

ಮೋರ್ ಬೋಲೆ ಚಕೋರ್ ಬೋಲೆ ಆಜ್ ರಾಧಾಕೆ ನಯನೋಂಮೆ ಶ್ಯಾಂ ಢೋಲೆ।। ಶ್ಯಾಂ ಮೇರಿ ಫೀಕಿ ಫೀಕಿ ಅಖಿಯೋಂಕ ಕಜರಾ। ವಹೀ ಮೇರಿ ಸೂನಿ ಸೂನಿ ಬಗಿಯೋಂಕಾ ಗಜರಾ। ಮೇರೆ ಜೀವನ್ ಮೆ ರಸ್‌ಕಿ ಫುಆರ್ ಬೋಲೆ।।1।। ದೂರ್ ಸೇ ಕನ್ಹೈಯ್ಯಾನೆ ಮುರುಖಕೋ ಪುಕಾರಾ। ಮುರಲೀ ಕೀ ಧುನ್ ಮೆ ಕಿಯಾಹೈ ಇಷಾರಾ। ಮೇರೆ ಸಪನೋಂಕಿ ಬೀನಾಕೇ ತಾರ್ ಬೋಲೆ।।2।। ಆಜ್ ಮೇರೆ ಮನ್‌ಕೆ ಲಗನ್ ರಂಗ್‌ಲಾಯಿ। ಯಾರ್ ಕಾ ಸಂದೇಶಾ ಭೀ ಸಂಗ್ ಸಂಗ್ ಲಾಯಿ। ಮೇರಿ ಬಗಿಯೋಂ ಮೆ ಛಂ ಛಂ ಬಹಾರ್ ಬೋಲೆ।।3।।

**ರಾಜೀವಾಕ್ಷ ಬಾರೋ ಕೃಷ್ಣ** **ರಾಗ: ಮಾಂಡ್, ಆದಿತಾಳ**

ರಾಜೀವಾಕ್ಷ ಬಾರೋ ಕೃಷ್ಣ ರಾಧಾರಮಣ ಬಾರೋ।।ಪ।। ಮೂಜಗ ಸ್ಥಿತಿಲಯ ಮೂಲ ಮುಕುಂದ ಬಾರೋ।।ಅ.ಪ।। ನೀರಜ ಸನ್ನಿಭಗಾತ್ರ ನಿತ್ಯಹರ ನೀ ಬಾರೋ। ವಾರಿಜ ಪಾದಾಬ್ಜ ವರದ ವಾರಿಜನಾಭನೆ ಬಾರೋ।।ಚರಣ।।

**ಕ್ಷೀರಾಪಾರವಾರಶಯನ ತಾ** **ರಾಗ: ಆರಭಿ**

ಕ್ಷೀರಾಪಾರವಾರಶಯನ। ತಾ ನಾಟ್ಯವಾಡಿದ।।ಪ।। ಸುರರು ಪೊಗಳುತ ತುಂಬುರರು ಪಾಡುತಿಹ। ಉರಗ ಪತಿಯ ಘನ ಫಣಿಯ ಮೇಲೆ।।ಅ.ಪ।। ಚರಣದಿ ನೂಪುರ। ಘಲ್ಲು ಘಲ್ಲೆನಲು ಕರದಿ ವಜ್ರ ಕಂಕಣ ಮೆರೆಯೆ। ಉರದಲಿ ಮುತ್ತಿನ ಸರಗಳ ಮಧ್ಯದಿ ವರ ತುಳಸಿ ಮಾಲೆಯು ಶೋಭಿಸುತಲೀ।।1।. ದಿತ್ತರಿ ತಕಜಂ ತಕ ತಳಾಂಗುತಕ। ತಕಜುನು ತಕಜುನು। ತನದಿರಿನಂ। ಧೀಂ ತನನನ ತಕ ಸಾಹಸ ಧೀಂತಕ। ಧಿತ್ತಳಾಂಗು ತಕ ತಕ ಜುನು ಎನುತಲಿ।।2।। ದಾದ ದಾದ। ದಪದಸ ಪದಪಮ। ಪಮಪದ ಪಮ ರಿರಿ ಸರಿ ಮಪ ದಪಾ। ಪಮಪದ ಸಸರಿರಿ। ಸರಿಮರಿ ಸದಸಪದ ಸರಿಮ ಸರಿಸ ದಪದಪ ಪ ಎನುತೆ।।3।। ಅಂಡಜ ಧ್ವಜ ಮಣಿ ಕುಂಡಲ ಧರ ಬ್ರಂಹ್ಮಾಂಡ ನಾಯಕನ ಮುದದಲಿ ಭೂ। ಮಂಡಲವನು ಸಂರಕ್ಷಿಸಿ ಮೇಣ್। ಅಂಡಜಾಧಿಪನ ಗರ್ವವ ಹರಿಸಲು।।4।।

## ಕೀರ್ತನೆ

**ಗರುಡ ಗಮನ ಸಮಯಯಿದೆ** **ರಾಗ: ನಾಗಸ್ವರಾಳಿ, ರೂಪಕತಾಳ**

ಗರುಡ ಗಮನ ಸಮಯಯಿದೆ ಕರುಣ ಜೂಡರಾರಾ।।ಪ।। ನಿರುಪಮ ಸುಂದರಾಕಾರ ನಿಜಭಕ್ತ ಜನೋದ್ಧಾರ।।ಅ.ಪ।। ಪವನಜಾದಿನುತ ಧೃತಜ ಪವನಜಾಪ್ತ ಕುಲಜಾತ। ಪವನ ಜಾಲ ಯಾದವ ಭೂಪ ವನಜಾಕ್ಷ ಶ್ರೀ ವೆಂಕಟೇಶ।।ಚರಣ।।

**ಜ್ಞಾನಮೊಸಗರಾದಾ ಗರುಡ** **ರಾಗ: ಪೂರ್ವಿಕಲ್ಯಾಣಿ, ರೂಪಕತಾಳ**

ಜ್ಞಾನಮೊಸಗರಾದಾ ಗರುಡ ಗಮನ ವಾದಾ।।ಪ।। ನೀ ನಾಮಮು ಚೇನಾಮದಿ ನಿರ್ಮಲಮೈನದಿ।।ಅ.ಪ।। ಪರಮಾತ್ಮುಡು ಜೀವಾತ್ಮುಡು ಪದುನಾಲುಗು ಲೋಕಮುಲು। ನರಕಿನ್ನರ ಕಿಂಪುರುಷುಲು ನಾರದಾದಿಮುನುಲು। ಪರಿಪೂರ್ಣ ನಿಷ್ಕಳಂಕ ನಿರವಧಿ ಸುಖದಾಯಕ। ವರತ್ಯಾಗ ರಾಜಾರ್ಚಿತ ವಾರಮು ತಾನನೆಡಿ।।ಜಾ।।ಚರಣ।।

**ದೇವಾದಿದೇವ ಶ್ರೀ ವಾಸುದೇವ** **ರಾಗ: ಸುನಾದವಿನೋದಿನಿ, ಆದಿತಾಳ**

ದೇವಾದಿದೇವ ಶ್ರೀ ವಾಸುದೇವ ಕಾವುಮೈಯ್ಯ ನನ್ನು ಕರುಣಾಲವಾಲ।।ಪ।। ಈ ವೇಳನಾ ಆರು ಶತ್ರುಲನು ನೀವೇ ಪಾರದ್ರೋಲಿ ನಿಜಭಕ್ತುಜೇಸಿ।।ಅ.ಪ।। ನೇ ಜೇಸಿನಾ ಪೂಜಾ ಫಲಮು ನಾ ಪೂರ್ವಜುಲ ಪುಣ್ಯಫಲಮು ಶ್ರೀಜಾನಕೀಶ ಈ ಜನ್ಮಮಿಚ್ಚಿ ನನ್ನು ಧನ್ಯುನಿಗ ಭುವಿಜೇಸಿತಿವಿ ।।ಚರಣ।।

**ನೇನೆಂದು ವೆದುಕುದುರಾ** **ರಾಗ: ಕರ್ನಾಟಕಬೇಹಾಗ್, ಆದಿತಾಳ**

ನೇನೆಂದು ವೆದುಕುದುರಾ ಶ್ರೀಹರಿ।।ಪ।। ಆ ನಾಲ್ಗು ಮೋಮುಲವಾನಿಮೊರ। ನಾಲಂಗಿಚಿರಾನಿ ನಿನ್ನು।।ಅ.ಪ।। ಕಲುಷಾತ್ಮುಡೈನ ದುಷ್ಕರ್ಮಯುತುಡೈ ಪಲುಮಾರು ದುರ್ಭಾಷಿಯೈ ಇಲಲೋ ಭಕ್ತಾಗ್ರೇಸರುಲಲೋ। ವೇಷಿಯೈ ತ್ಯಾಗರಾಜಪೂಜಿತ।।ನೇನೆಂದು।।

**ಮರಕತ ಮಣಿವರ್ಣ ಮಾಮವ** **ರಾಗ: ಸಾರಂಗ, ಆದಿತಾಳ**

ಮರಕತ ಮಣಿವರ್ಣ ಮಾಮವ।।ಪ।। ನೀಲಮೇಘಶ್ಯಾಮ ಕಾಯ ವೇಣುಗಾನ ಮಾಯಾಜಾಲ।।ಅ.ಪ.।। ಕಾಳಿಂಗ ಮರ್ಧನ ಕಂಸಾಸುರ ಮಥನ ಗೋವರ್ಧನೋದ್ಧಾರ। ಗೋಪೀ ಜನೋದ್ಧಾರ ಗಾನಲೋಲ ನರ್ತನ ಶೀಲ ಕಪಟನಾಟಕ ಸೂತ್ರಧಾರ।।ಚರಣ।।

**ಮಾನಮುತೋ ನನ್ನು ಬ್ರೋವರಾದ** **ರಾಗ: ಷಣ್ಮುಖಪ್ರಿಯ, ಆದಿತಾಳ**

ಮಾನಮುತೋ ನನ್ನು ಬ್ರೋವರಾದ ದೀನಬಾಂಧವ ಶ್ರೀವಾಸುದೇವ।।ಪ।। ಶ್ರೀನಿಕೇತನ ನೀ ನಾಮಮು ಪ್ರೇಮತೋ ಧ್ಯಾನಮು ಸೇಯುಟ ಸುಜ್ಞಾನ ಮೊಸಗರಾದ।।ಅ.ಪ।। ವಾರಿಧಿಶಯನ ವಾರಿಜಲೋಚನ ವಾರಿತ ದುರ್ಜನ ವರಖಗವಾಹನ। ಕರಿಮೊರಲಿಡ ನೀವು ಕರುಣತೋ ಬ್ರೋವಲೇದ ಪರಮ ಪುರುಷ ನಿನ್ನೇ ನಮ್ಮಿನ ವಾಡೆಗಾದ।।ಚರಣ।।

**ಮಾನಿತ ಗುಣಶೀಲ ಹರೇ** **ರಾಗ : ಶಂಕರಾಭರಣ, ಆದಿತಾಳ**

ಮಾನಿತ ಗುಣಶೀಲ ಹರೇ ಶ್ರೀಕೃಷ್ಣ ಯಶೋದ ಬಾಲ ದಯಾಲವಾಲ।।ಪ।। ನವನೀತ ಚೋರ ನಂದಕಿಶೋರ ರಾಕ್ಷಸ ಸಂಹಾರ ಭಕ್ತಜನ ಮಂದಾರ।।ಅ.ಪ।। ರುಕ್ಮಿಣಿ ಲೋಲ ವೇಣುಗೋಪಾಲ ರಾಧಾರಮಣ ಸಂಕಟಹರಣ।।ಚರಣ।।

**ವಾಸುದೇವ ಯನಿ ವೆಡಲಿನ** **ರಾಗ: ಕಲ್ಯಾಣಿ, ಆದಿತಾಳ**

ವಾಸುದೇವ ಯನಿ ವೆಡಲಿನ ಈ ದೌ-ವಾರಿಕುನಿ ಗನರೇ ವಾಸವಾದಿ ಸುರಪೂಜಿತುಡೈ ವಾರಿಜ ನಯನುನಿ ಮದಿನಿ ದಲಚುಚುನು॥ಅ.ಪ॥ ನೀರುಕಾವಿ ಧೋವತುಲನುಗಟ್ಟಿ। ನಿಟಲಮುನನು ಶ್ರೀಚೂರ್ಣಮು ಬೆಟ್ಟಿ। ಸಾರಿವೆಡಲಿ ಈ ಸಭಲೋ ಜುಟ್ಟಿ। ಸಾರೆಕು ಬಂಗರು ಕೋಲನು ಬಟ್ಟಿ॥11॥ ಮಾಟಿಮಾಟಿಕಿನಿ ಮೀಸಮುದುವ್ವಿ। ಮನ್ಮಥ ರೂಪುಡು ಕಾನನಿ ಕ್ರೌವ್ವಿ ದಾಟಿದಾಟಿ ಪಡುಚುನು ತಾ ನಿವ್ವಿ-। ಧಂಬುನ ಬಲುಕುಚು ಪಕಪಕನವ್ವಿ॥2॥ ಬಾಗುಮೀರ ನಟನಮು ಸೇಯುಚುನು। ಪತಿತಪಾವನುನಿ ತಾ ವೇಡುಚುನು। ರಾಗ ತಾಳ ಗತುಲನು ಬಾಡುಚುನು। ತ್ಯಾಗರಾಜ ಸನ್ನುತುನಿ ಬೊಗಡುಚುನು॥3॥

**ವಿನುತಾಸುತವಾಹನುಡೈ** **ರಾಗ:ಹರಿಕಾಂಬೋದಿ, ಆದಿತಾಳ**

ವಿನುತಾಸುತವಾಹನುಡೈ। ವೆಡಲಿನೊ।ಕಾಂಚೀ ವರದುಡೈ॥ಪ॥ ವನಜಾ ಸನಾದಿ ಸುರುಲೂ। ಸನಕ ಸನಾದಿ ಮುನುಲತೋ ಗೂಡ್ಗಿನಾ॥ಅ.ಪ.॥ ನೆರೆ ವೈಶಾಖೋತ್ಸವ ಮುನ ದಶದಿನಾ। ಕರುಣದಯಂಚಿ। ಯನಿ ಪಶ್ಚಿಮ ಗೋಪುರ ದ್ವಾರಮುನು ಚರ ಚರ ಮುನಗೋ। ವರತ್ಯಾಗರಾಜ ಮುನಲ ತೋ ಗೂಡಿನ॥1॥

**ಸಾಮಜ ವರಗಮನ ಸಾಧು ಹೃತ್ಸಾರ** **ರಾಗ: ಹಿಂದೋಳ, ಆದಿತಾಳ**

ಸಾಮಜ ವರಗಮನ ಸಾಧು ಹೃತ್ಸಾರ ಸಾಬ್ಜಪಾಲ ಕಾಲಾತೀತ ವಿಖ್ಯಾತ ॥ಪ॥ ಸಾಮನಿಗಮಜ ಸುಧಾಮಯಗಾನವಿಚಕ್ಷಣ ಗುಣಶೀಲ ದಯಾಲವಾಲ ಮಾಂ ಪಾಲಯ॥ಅ.ಪ॥ ವೇದ ಶಿರೋ ಮಾತೃಜ ಸಪ್ತಸ್ವರ ನಾದಾಚಲದೀಪ ಸ್ವೀಕೃತ ಯಾದವ ಕುಲ ಮುರಳೀ ವಾದನ ವಿನೋದ ಮೋಹನ ಕರ ತ್ಯಾಗರಾಜ ವಂದನೀಯ॥ಚರಣ॥ ಚಿಟ್ಟೆಸ್ವರ: ಸಾಸನಿದ ನಿದಮ ಧಮಗ ಮಗಸನಿ। ಸಾನಿ ಸಮಗಮ। ಸಗನಿಸ ಗಮದನಿ॥ ಸಗಮಗಸನಿ ಸಗಸನಿದನಿ । ಸನಿದನಿ ಸಗಸನಿದನಿ। ಸನಿ। ದಮಗ ಸಗಮದನಿ॥

**ಸಾರಸಾಕ್ಷ ಪರಿಪಾಲಯ** **ರಾಗ: ಕಾಮವರ್ದಿನಿ, ಆದಿತಾಳ**

ಸಾರಸಾಕ್ಷ ಪರಿಪಾಲಯ ಮಾಮಯಿ। ಸಂತತಂ ಕರುಣಯಾ ಜಗದೀಶ॥ಪ॥ ನೀರಜಾಸ್ತ್ರ ಜನಕಾಧಿಕ ಮೇಚಕ ನೀರದಾಭ ಕರಿನಾಯಕ ಭಯಹರ॥ಅ.ಪ॥ ಭೀಮಸೇವ್ಯ ತವ ಮಂಗಳ ಲೀಲಮು। ದಾಕುರುಮೇ ಕುಶಲಂಭವ। ಭೀತಿನಾಶ-ನಚನಾದ್ಬುತ। ಗುಣನಿಲಯ ಭಾಮಿನಿ ಸಮುದಯಾಶಯ ಮೋಹನ। ಪದ್ಮನಾಭ ಪರಿಪಾಲಯ ಮಾಮವ॥ಚರಣ॥

**ಸಂತಾನ ಗೋಪಾಲಕೃಷ್ಣಮುಪಾಸ್ಮಹೇ** **ರಾಗ: ಕಮಾಚ್, ರೂಪಕತಾಳ**

ಸಂತಾನ ಗೋಪಾಲಕೃಷ್ಣಮುಪಾಸ್ಮಹೇ ಶ್ರೀ॥ಪ॥ ಸಂತಾನ ಸೌಭಾಗ್ಯ ವಿತರಣ ನಿಪುಣತರಂ। ಸಂತತಂ ಸದ್ಗುರುಗುಹ ಸನ್ನುತಂ ಸಾರಸಕರಂ॥ಅ॥ ಶ್ರೀ ರುಕ್ಮಿಣೀ ಸತ್ಯಭಾಮಾ ಸಮೇತಂ। ಅರ್ಜುನ ಪ್ರೇಮಾಸ್ಪದಂ ಆಶ್ರಿತ ಜನಫಲದಂ। ನರ್ತನ ಮುರಳೀಧರಂ ನತಶುಕಸನಕ ನಾರದಂ। ನೀರಜಾಸನಾದಿನುತಂ ನೀಲಮೇಘಜಿತ ಗಾತ್ರಂ॥ಚ॥

## ಭಜನೆ

**ಅಬ್ ತೇರೇ ಸಿವಾ ಕೌನ್ ಮೇರಾ (ಹಿಂದಿ)** **ರಾಗ: ಸಿಂಧೂಭೈರವಿ**

ಅಬ್ ತೇರೇ ಸಿವಾ ಕೌನ್ ಮೇರಾ ಕೃಷ್ಣ ಕನ್ಹೈಯ್ಯಾ। ಭಗ್‌ವಾನ್ ಕಿನಾರೇ ಸೇ ಲಗಾ ದೇ ಮೇರಿ ನೈಯ್ಯಾ॥1॥ ಪೂಜಾ ನಹೀಂ ಹೈ ಪೂರಿ ಅಧೂರೀ ಹೈ ಆರತಿ। ಓ ಶ್ಯಾಮ್ ಸಲೋನೇ ತುಝೆ ಮೀರಾ ಪುಕಾರತಿ॥2॥ ಕರತೀ ಹೈ ಬಾರ್‌ಬಾರ್ ವೋ ಲೇ ಲೇ ಬಲಿಯಾ। ಭಗವಾನ್ ಕೀ ನಾರೇ ಸೇ ಲಗಾ ದೇ ಮೇರಿ ನೈಯ್ಯಾ॥3॥ ಅಬ್ ಮೇರೀ ಖುಷೀ ಕೀ ದುನಿಯಾ

ಬಾಬುಲ್ ನೇ ಛೀನ್ ಲೀ। ಮೇರೇ ಸುಖೋಂ ಕೀ ಖಲಿಯಾಂ ಕಿಸ್ಮತ್ ನೇ ಛೀನ್ ಲೀ।।4।। ಅಬ್ ತೂಹೀ ಬಚಾ ಲಾಜ್ ಮೇರೀ ಬಸ್ಸಿ ಭಜೈಯ್ಯಾ। ಬಚ್‌ಪನ್ ಮೇ ಛೋಡ್ ಕೇ ಮೇರೀ ಮಾಯೀ ಚಲೀ ಗಯೀ। ಉಸಕೋ ಮೈಂ ಢೂಂಢತಾ ಅಂಧೇರಿ ರಾತ್ ಮೇ ಭಗವಾನ್।।5।।

**ಗೋಪಾಲ ಗೋಪಾಲ ಗೋಕುಲ ನಂದನ** **ರಾಗ: ಕಲ್ಯಾಣಿ**

ಗೋಪಾಲ ಗೋಪಾಲ ಗೋಕುಲ ನಂದನ ಗೋಪಾಲ।। ಗೋಪಾಲ ಗೋಪಾಲ, ಗೋಪಾಲ ಗೋಪಾಲ, ಗೋಪಾಲ, ಗೋಕುಲ ನಂದನ ಗೋಪಾಲ।। ನಂದಕುಮಾರ ಗೋಪಾಲ। ನವನಿತಚೋರ ಗೋಪಾಲ।। ನಂದಕುಮಾರ ನವನಿತಚೋರ। ನಂದನಂದನ ಗೋಪಾಲ ಗೋಪಾಲ।। ಅನಾಥರಕ್ಷಕ ಗೋಪಾಲ। ಆಪದ್ಬಾಂಧವ ಗೋಪಾಲ।। ಅನಾಥ ರಕ್ಷಕ ಆಪದ್ಬಾಂಧವ ಅಖಿಲಾಧಾರ ಗೋಪಾಲ ಗೋಪಾಲ।।

**ಗೋವಿಂದ ಮಾಧವ** **ರಾಗ: ಮೋಹನ**

ಗೋವಿಂದ ಮಾಧವ ಗೋಪಾಲ ಕೇಶವ । (3), ಜಯನಂದ ಮುಕುಂದ ಆನಂದ ಗೋವಿಂದ ರಾಧೆ ಗೋಪಾಲ ।।1।। ಗಿರಿಧಾರಿ (2) ಜಯ, ರಾಧೆ ಗೋಪಾಲ।(2) ಘನಶ್ಯಾಂ ಶ್ಯಾಂ ಶ್ಯಾಂ ಜೈ (2), ರಾಧೆ ಗೋಪಾಲ । ಜಯನಂದ ಮುಕುಂದ ಆನಂದ ಗೋವಿಂದ ರಾಧೆ ಗೋಪಾಲ।।2।।

**ಜಯ ಜಯ ಗೋವಿಂದ** **ರಾಗ: ಮೋಹನ**

ಜಯ ಜಯ ಗೋವಿಂದ ಜಯಹರಿ ಗೋವಿಂದ (6 ಸಲ)।। ಹೇ ನಂದಲಾಲ ಹೇ ನಂದಲಾಲ। ಗೋಪಿ ಮನೋಹರ ಗೋಕುಲಬಾಲ। ವಿಶ್ವವಂದಿತ ವೇಣುಗೋಪಾಲ। ವೇದವೇದಾಂತ ವೇಣುಗೋಪಾಲ। ಗಾನವಿಲೋಲ ರಾಜಗೋಪಾಲ। ರಾಧಾವಲ್ಲಭ ರಾಸವಿಲೋಲ।। ಹೇ ನಂದಲಾಲ ಹೇ ನಂದಲಾಲ।।

**ಜಯ ರಾಮಕೃಷ್ಣ ಗೋವಿಂದ** **ರಾಗ: ಮೋಹನ**

ಜಯ ರಾಮಕೃಷ್ಣಗೋವಿಂದ ಜನಾರ್ದನ ಅಚ್ಯುತ ಪರಮಾನಂದ। ಅಚ್ಯುತ ಪರಮಾನಂದ ನಿತ್ಯಾನಂದ ಮುಕುಂದ ।।1।। ಕಂಸ ಧ್ವಂಸ ಕಾಳಿಯಮರ್ದನ। ದೇವಕಿ ತನಯ ತವ ಶರಣಂ।।2।। ಜಯರಾಮ (4) ಜಯರಾಮ ರಾಮ ರಾಮ (3) ಜಯರಾಮ್ ಜಯ।।3।। ಅಯೋಧ್ಯಾ ವಾಸಿ ರಾಮ್। ದಶರಥನಂದನ ರಾಮ್। ಪತಿತ ಪಾವನ ಜಾನಕಿ ಜೀವನ ಸೀತಾ ಮೋಹನ ರಾಮ್।।4।।

**ತುಂ ಶ್ಯಾಂ ಮೋಹನ್ ಪ್ಯಾರೇ (ಹಿಂದಿ)** **ರಾಗ: ಸಿಂಧುಭೈರವಿ**

ತುಂ ಶ್ಯಾಂ ಮೋಹನ್ ಪ್ಯಾರೇ ಮನ್‌ಕಿ ಬಾತ್ ಜಾನೋ ತುಮ್।।ಪ।। ಜಾಕೆ ಸಿರ್ ಮೋರ್ ಮುಕುಟ್ ತೇರೊ ಪತಿಕೋಯಿ। ಶಂಖಚಕ್ರಗಧಾಪದ್ಮ ಕಂಠಮಾಲ ಶೋಭೆ।।1।। ತಾತ್ ಮಾತ್ ಸುತನ್ ಭ್ರಾತ್ ಅಬ್‌ತೊ ಬಾತ್ ಕೋಯಿ। ಚಾಂಡೆ ದಹೀ ಕುಲ್ ಕಿ ಕಾನಿ ಜಾನಿಸೋಯ ಹೋಯಿ।।2।। ಪ್ರಭು ಅಸಸಿತ್ ಸೀಂಚ್‌ಸೀಂಚ್ ಅಬ್ ತೊ ಬಾತ್ ಕೋಯಿ। ಮೀರಾ ಪ್ರಭುಲಫನ್ ಲಗೀ ಅನೀ ಸೋಯ ಹೋಯಿ।।3।।

**ದರುಶನ ದೋ ಘನಶ್ಯಾಂ (ಹಿಂದಿ)** **ರಾಗ: ಸಾರಂಗ**

ದರುಶನ ದೋ ಘನಶ್ಯಾಂ ನಾಥಮೋರಿ ಅಖಿಯನ್ ಪ್ಯಾಸಿರೇ। ಮನ ಮಂದಿರ್ ಕೀ ಜ್ಯೋತಿ ಜಗಾದೊ ಘಟ್ ಘಟ್‌ವಾಸಿ ರೇ।।1।। ನಿರಬಲ್ ಕೆ ಬಲ್, ಧನ್ ನಿರ್‌ಧನ್ ಕೆ ತುಮ್ ರಖವಾರೆ, ಭಕ್ತ ಜನನ್ ಕೆ ತೇರೀ ಭಜನ್ ಮೆ ಸಬಕುಛ ಪಾವೋ ಮಿಠೇ ಉದಾಸೀ ರೇ।।2।। ನಾಮ್ ಜಪೆ ಪರ್ ತುಝೋ ನ ಜಾನೆ, ಉನ್‌ಕೋ ಭೀ ತೂ। ಅಪನಾಮಾನೆ, ತೇರೀ ದಯಾಕ ಅಂತ ನಹೀ ಹೈ (2) ಹೈ ದುಃಖನಾಸಿ ರೇ।।3।। ದ್ವಾರ್ ಖಡಾ ಕೈಸೇ ಮತವಾಲಾ। ಮಾಂಗೆ ತುಮ್‌ಸೆ, ಹಾರ್ ತುಮ್ಹಾರಾ। ನರ್‌ಸಿ ಕಿ ಏ, ಬಿನ್ತಿ ಸುನಲೋ (2) ಭಕ್ತಬಿಲಾಸಿ ರೇ।।4।।

**ನಟವರಲಾಲ್ ಗಿರಿಧರ ಗೋಪಾಲ್ (ಹಿಂದಿ)** **ರಾಗ:ಕಲ್ಯಾಣಿ**

ನಟವರಲಾಲ್ ಗಿರಿಧರ ಗೋಪಾಲ್ ಜೈ ಜೈ। ನಂದ ಯಶೋದಾ ಕೆ ಲಾಲ್ ಸಾರ ಸಾರ ಸಬಕೇ ಸಾರ ರಾಧಾ ರಸಿಕವರ ರಾಸವಿಹಾರ್॥1॥ ಶಸರದ ಪೌರ್ಣಿಮಾ ನಿರ್ಮಲ ಯಮುನಾ-ಅದ್ಭುತ ರಾಸ ಮಹೋತ್ಸವ ಅನುಪಮ। ಸಾರ ನಿರ್ಮಲ ಯಮುನಾ ಅದ್ಬುತ ರಾಸ ಮಹೋತ್ಸವ॥2॥ ಸ್ವಟಿಕ ಮಯ ಗೋಪೀ ಮಂಡಲಧಾಮ್॥2ಸಾರಿ॥ ಮಧ್ಯ ಮರಕತ ಶ್ಯಾಮ್। ಸಾರ ಮಂಡಲಧಾಮ್॥3॥

**ನಾರಾಯಣಂ ನಮೋ** **ರಾಗ: ಮಾಂಡ್**

ನಾರಾಯಣಂ ನಮೋ ನಾರಾಯಣಂ ನಮೋ (3) ನಾರಾಯಣಂ। ನಾರಾಯಣಂ ಲಕ್ಷ್ಮೀ (3) ನಾರಾಯಣಂ। ನಾರಾಯಣಂ ಭಜೋ (3) ನಾರಾಯಣಂ। ನಮೋ ನಾರಾಯಣಂ (2)।

**ನಾರಾಯಣ ಹರಿ ನಾರಾಯಣ**

ನಾರಾಯಣ ಹರಿ। ನಾರಾಯಣ ಹರಿ। ನಾರಾಯಣ ಹರಿ ಭಜೋರೇ। ರಾಮಕೃಷ್ಣ ಹರಿ ಮದನ ಗೋಪಾಲ। ಗೋಪಿ ಕೃಷ್ಣ ಹರಿ ಶ್ಯಾಮ ಗೋಪಾಲ। ಗೋಪಿ ಗೋಪಾಲ ಗೋಪಿ ಗೋ ಪಾಲ।ಗೋಪಿ ಗೋಪಾಲ ನ ಭಜೋರೆ॥

**ನಂದ ಮುಕುಂದ ಹರೇ ಗೋಪಾಲ** **ರಾಗ: ಕಲ್ಯಾಣಿ**

ನಂದ ಮುಕುಂದ ಹರೇ ಗೋಪಾಲ। ಭಕ್ತ ಸಂರಕ್ಷಕ ವೇಣು ಗೋಪಾಲ। ನಂದಾನಂದ ಮುಕುಂದ ಗೋಪಾಲ।ಗೋಪೀಜನಪ್ರಿಯ ಗೋ ಪರಿಪಾಲ ಬೃಂದಾವನ ಹರಿ ನಂದ ಕುಮಾರ। ನಿಗಮೋದ್ಧಾರ ನವನೀತ ಚೋರ॥

**ಭಜರೇ ಗೋಪಾಲಂ ಮಾನಸ** **ರಾಗ: ಹಿಂದೋಳ**

ಭಜರೇ ಗೋಪಾಲಂ ಮಾನಸ। ಭಜರೇ ಗೋಪಾಲಂ॥ಪ॥ ಭಜ ಗೋಪಾಲಂ ಭಜಿತ ಕುಚೇಲಂ। ತ್ರಿಜಗನ್ಮೂಲಂ ದಿತಿಸುತಕಾಲಂ॥1॥ ಆಗಮಸಾರಂ ಯೋಗವಿಚಾರಂ। ಭೋಗಶರೀರಂ ಭುವನಾಧಾರಂ॥2॥ ಕದನಕಠೋರಂ ಕಲುಷವಿದೂರಂ। ಮದನಕುಮಾರಂ ಮಧುಸಂಹಾರಂ॥3॥ ನತಮಂದಾರಂ ನಂದಕಿಶೋರಂ। ಹತಚಾಣೂರಂ ಹಂಸವಿಚಾರಂ॥4॥

**ಮುರಲಿ ಮನೋಹರ ರಾಧೇಶ್ಯಾಮ** **ರಾಗ: ಶ್ರೀರಾಗ**

ಮುರಲಿ ಮನೋಹರ ರಾಧೇಶ್ಯಾಮ। ಗೋಪಿ ವಲ್ಲಭ ರಾಧೇ ಶ್ಯಾಮ॥ಪ॥ ದೇವಕಿ ನಂದನ ರಾಧೇ ಶ್ಯಾಮ। ರಾಧೇ ಶ್ಯಾಮ ಜಯ ರಾಧೇ ಶ್ಯಾಮ॥1॥ ವೇಣುವಿಲೋಲಾ ರಾಧೇ ಶ್ಯಾಮ। ವಿಜಯ ಗೋಪಾಲ ರಾಧೇ ಶ್ಯಾಮ॥2॥ ನಂದಕುಮಾರ ರಾಧೇ ಶ್ಯಾಮ। ನವನೀತ ಚೋರ ರಾಧೇಶ್ಯಾಮ॥3॥

**ರಾಧ್ಯೇಶ್ಯಾಮ್ ರಾಧೇಶ್ಯಾಮ್ ರಾಧಾ ಮಾಧವ** **ರಾಗ:ಶಂಕರಾಭರಣ, ಛಾಪುತಾಳ**

ರಾಧೇಶ್ಯಾಮ್। ರಾಧೇಶ್ಯಾಮ್। ರಾಧಾ ಮಾಧವ ರಾಧೇಶ್ಯಾಮ್। ಜಾನಕಿರಾಮ್। ಜಾನಕಿ ರಾಮ್। ಸೀತಾನಂದ ಮೇಘಶ್ಯಾಮ್॥ ಅಕ್ರೂರವರದ ರಾಧೇಶ್ಯಾಮ್। ಅರವಿಂದ ನಯನ ಜಾನಕಿರಾಮ್। ಯದುಕುಲತಿಲಕ ರಾಧೇಶ್ಯಾಮ್। ರವಿಕುಲ ತಿಲಕ ಜಾನಕಿರಾಮ್॥1॥ ಕಾಳಿಯ ಮರ್ಧನ ರಾಧೇಶ್ಯಾಮ್। ಕಪಿನಾಯಕ ಪ್ರಿಯ ಜಾನಕಿರಾಮ್। ವಾಸುದೇವ ಬಾಲಕ ರಾಧೇಶ್ಯಾಮ್। ದಶರಥ ತಿಲಕ ಜಾನಕಿರಾಮ್॥2॥ ಕನಕನಿಗೊಲಿದ ರಾಧೇಶ್ಯಾಮ್। ಕೈಕೇಯಿ ಪ್ರಿಯ ಜಾನಕಿರಾಮ್। ಕಮಲ ಮನೋಹರ ರಾಧೇಶ್ಯಾಮ್। ಕರುಣಾಸಾಗರ ಜಾನಕಿರಾಮ್। ರುಕ್ಮಿಣಿವಲ್ಲಭ ರಾಧೇಶ್ಯಾಮ್॥3॥ ರಘುಪತಿ ರಾಘವ ಜಾನಕಿರಾಮ್। ಪಂಡರಿನಾಥ

ರಾಧೇಶ್ಯಾಮ್। ಪುರಾಣ ಪುರುಷ ಜಾನಕಿರಾಮ್।।4।। ಅಂಬರೀಷ ವರದ ರಾಧೇಶ್ಯಾಮ್। ಅಕಳಂಕ ಭರಿತ ಜಾನಕಿರಾಮ್। ಅನಂತ ಶಯನ ರಾಧೇಶ್ಯಾಮ್। ಅನಾಥ ರಕ್ಷಕ ಜಾನಕಿರಾಮ್।।5।। ಯದುಕುಲ ತಿಲಕ ರಾಧೇಶ್ಯಾಮ್। ಕಪಿನಾಯಕ ಪ್ರಿಯ ಜಾನಕಿರಾಮ್। ದೇವಕಿ ಕಂದನೆ ರಾಧೇಶ್ಯಾಮ್। ದಶರಥ ನಂದನ ಜಾನಕಿರಾಮ್।।6।। ಮುರಳಿ ಮನೋಹರ ರಾಧೇಶ್ಯಾಮ್। ಮಂಗಳ ಮಹಿಮ ಜಾನಕಿರಾಮ್। ಮುರಳಿ ಮನೋಹರ ರಾಧೇಶ್ಯಾಮ್। ಮಂಗಳ ಮಹಿಮ ಜಾನಕಿರಾಮ್।।7।। ಪಾಂಡವ ಪ್ರಾಣನೆ ರಾಧೇಶ್ಯಾಮ್। ಪ್ರಿಯಗುಹ ಪೂಜಿತ ಜಾನಕಿರಾಮ್। ಕೌರವ ಶಿಕ್ಷಕ ರಾಧೇಶ್ಯಾಮ್। ಖರಾದಿ ಶಿಕ್ಷಿತ ಜಾನಕಿರಾಮ್।।8।। ಕಂಸಮರ್ಧನ ರಾಧೇಶ್ಯಾಮ್। ರಾವಣ ಮರ್ಧನ ಜಾನಕಿರಾಮ್। ಗೋಪ್ವಳ ಪ್ರಿಯಹರಿ ರಾಧೇಶ್ಯಾಮ್। ಗೌರಿಪುತ್ರ ಪ್ರಿಯ ಜಾನಕಿರಾಮ್।।9।। ಗೋಕುಲ ಬಾಲಕ ರಾಧೇಶ್ಯಾಮ್। ಅಯೋಧ್ಯಬಾಲಕ ಜಾನಕಿರಾಮ್। ಕರಿರಾಜಪ್ರಿಯ ರಾಧೇಶ್ಯಾಮ್। ಕಾಮಿತ ದಾಯಕ ಜಾನಕಿರಾಮ್।।10।। ಅರ್ಜುನ ಸಾರತಿ ರಾಧೇಶ್ಯಾಮ್। ಅಮಿತ ಪರಾಕ್ರಮಿ ಜಾನಕಿರಾಮ್। ಮುನಿಜನ ವಂದಿತ ರಾಧೇಶ್ಯಾಮ್। ಶಬರಿ ಪೂಜಿತ ಜಾನಕಿರಾಮ್।।11।। ಪಾಂಡವ ಪ್ರಿಯನೆ ರಾಧೇಶ್ಯಾಮ್। ಮಾರುತಿ ಪ್ರಿಯನೆ ಜಾನಕಿರಾಮ್। ಶಂಖಚಕ್ರಧರ ರಾಧೇಶ್ಯಾಮ್। ವರ ಕೋದಂಡಧರ ಜಾನಕಿರಾಮ್।।12।। ಯಶೋದನಂದನ ರಾಧೇಶ್ಯಾಮ್। ಯತಿಜನ ರಕ್ಷಕ ಜಾನಕಿರಾಮ್। ಕಪಟನಾಟಕ ಪ್ರಿಯ ರಾಧೇಶ್ಯಾಮ್। ಕೌಸಲ್ಯಾನಂದ ಪ್ರಿಯ ಜಾನಕಿರಾಮ್।।13।। ಕೌಸ್ತುಭ ಮಣಿಧರ ರಾದೇಶ್ಯಾಮ್। ಕನಕಾಂಬರಧರ ಜಾನಕೀರಾಮ್। ಭವಭಯದೂರ ರಾಧೇಶ್ಯಾಮ್। ಬಾಲಹನುಮ ಪ್ರಭು ಜಾನಕಿರಾಮ್।।14।। ಮಾದವ ಕೇಶವ ರಾಧೇಶ್ಯಾಮ್। ಮಾನವ ವೇಷ ಜಾನಕಿರಾಮ್। ಜಯಜಯ ಮಂಗಳ ರಾಧೇಶ್ಯಾಮ್। ಜಯ ಶುಭ ಮಂಗಳ ಜಾನಕಿರಾಮ್।।15।।

**ರಾಧೇಶ್ಯಾಮ ಹೇ ಘನಶ್ಯಾಮ** **ರಾಗ: ಮಾಂಡ್**

ರಾಧೇಶ್ಯಾಮ ಹೇ ಘನಶ್ಯಾಮ ರಾಧಾಮಾಧವ ಮಂಗಳ ನಾಮ। ಜಯ ಜಯ ಜಯಹೇ ಮೇಘಶ್ಯಾಮ ಜಯ ಜಯ ಜಯ ಬೃಂದಾವನ ಧಾಮ। ಜಯ ಹರಿ ಗೋವಿಂದ ಜಯ ಹರಿ ಗೋವಿಂದ।।2ಸಾರಿ।।

**ಚಂದನ ಚರ್ಚಿತ – ಅಷ್ಟಪದಿ** ರಾಗ: ದೇಶ್, ಆದಿತಾಳ

ಚಂದನ ಚರ್ಚಿತ ನೀಲ ಕಳೇವರ ಪೀತವಸನವನಮಾಲಿ। ಕೇಳಿ ಚಲನ್ಮಣಿ ಕುಂಡಲ ಮಂಡಿತ ಗಂಡಯುಗಃಸ್ಮಿತಶಾಲೀ ।।1।। ಅನೇಕನಾರೀಪರಿರಂಭ ಸಂಭ್ರಮ ಸ್ಫುರನ್ಮನೋಹಾರಿ ವಿಲಾಸ ಲಾಲಸಂ। ಮುರಾರಿ ಮಾರಾದುಪದರ್ಶಯಂತ್ಯ ಸೌ ಸಖೀ ಸಮಕ್ಷಂ ಪುನರಾಹ ರಾಧಿಕಾಃ।।2।। ಪೀನಪಯೋಧರ ಭಾರಭರೇಣ ಹರಿಂ ಪರಿರಭ್ಯ ಸರಾಗಂ। ಗೋವಧೂರನು ಗಾಯತಿ ಕಾಂಚಿದುದಂಚಿತ ಪಂಚಮರಾಗಂ।।3।। ಕಾರಿ ವಿಲಾಸ ವಿಲೋರ ವಿಲೋಚನ ಖೇಲನ ಜನಿತ ಮನೋಜಂ। ಧ್ಯಾಯತಿ ಮುಗ್ಧವಧು ರಧಿಕಂ ಮಧುಸೂದನವದನ ಸರೋಜಂ।।4।। ಕಾಪಿ ಕಪೋಲ ತಲೇ ಮಿಲಿತಾಲಪಿತುಂ ಕಿಮಪಿ ಶ್ರುತಿಮೂಲೇ। ಕಾಪಿ ಚುಚುಂಬ ನಿತಂಬವತೀ ದಯಿತಂ ಪುಲ ಕೈರನುಕೂಲೇ।।5।। ಕೇಲಿಕಲಾಕುತು ಕೇನ ಚ ಕಾಚಿದಮಂ ಯಮುನಾ ಜಲಕೂಲೇ। ಮಂಜುಲವಂಜುಲಕುಂಜ ಗತಂ ವಿಚಕರ್ಷ ಕರೇಣ ದುಕೂಲೇ।।6।। ಕರತಲಕಾಲ ತರಲವಲಯಾವಲಿ ಕಲಿತಕಲಸ್ವನವಂತೇ। ರಾಸರಸೇ ಸಹ ನೃತ್ಯ ಪರಾ ಹರಿಣೌ ಯುವತೀ ಪ್ರಶಶಂಸೇ।।7।। ಶ್ಲಿಷ್ಯತಿ ಕಾಮಪಿ ಚುಂಬತಿ ಕಾಮಪಿ ಕಾಮಪಿರಮಯತಿ ರಾಮಾಂ। ವಶ್ಯತಿ ಸಸ್ಮಿತ ಚಾರುತರಾಮ ಪರಾಮನುಗಚ್ಛತಿ ವಾಮಾಂ।।8।। ಶ್ರೀಜಯದೇವ ಭಣಿತ ಮಿದಮದ್ಭುತ ಕೇಶವಕೇಲಿ ರಹಸ್ಯಂ। ವೃಂದಾವನ ವಿಪಿನೇ ಲಲಿತಂ ವಿತನೋತು ಶುಭಾನಿ ಯಶಸ್ಯಂ।।9।।

**ಶ್ಯಾಂ ರೇ ಘನ ಶ್ಯಾಂ ರೇ (ಹಿಂದಿ)** ರಾಗ: ಸಿಂಧುಭೈರವಿ

ಶ್ಯಾಂ ರೇ ಘನ ಶ್ಯಾಂ ರೇ 2, ಗೋವಿಂದ ಗೋಪಾಲ ಶ್ಯಾಂಮುರಾರಿ ಮೋರೆ ನಂದಲಾಲ್।।1।। ಮೋಹನ ಮಾಧವ, ಮೀರಾ ಪ್ರೀತಮ್ ಬ್ರಿಜ್ ಬಾಲಾ ।।2।। ನಂದನ, ನಾಗರ, ಪಾಂಡವ ರಕ್ಷಕ ಪರಿಪಾಲ।।3।।

**ಹರೀ ತುಮ್ ಹರೋ ಜನಕೀ ಪೀರ್ (ಹಿಂದಿ)** ರಾಗ: ಕಾನಡ

ಹರೀ ತುಮ್ ಹರೋ ಜನಕೀ ಪೀರ್॥ ದ್ರೌಪದೀಕೀ ಲಾಜ್ ರಾಖೀ। ತುಮ್ ಬಢಾಯೋ ಚೀರ॥ ಭಕುತಕಾರನ ರೂಪ ನರಹರಿ ಧರ್ಯೋ ಆಪ ಶರೀರ॥ ಹರಿನಕಶ್ಯಪ ಮಾರ ಲೀನ್ಹೋ। ಧರ್ಯೋ ನಾಹಿನ ಧೀರ॥ ಬೂಢತೇ ಗಜರಾಜ ರಾಖ್ಯೋ। ಕಿಯೋ ಬಾಹರ ನೀರ॥ ದಾಸ ಮೀರಾ ಲಾಲ ಗಿರಿಧರ ದುಃಖ ಜಹಾಂ ತಹಾಂ ಪೀರ॥

## "ಕೊಳಲು"

**ಊದೋ ಮನಮೋಹನ** **ರಾಗ: ಬೇಹಾಗ್**

ಊದೋ.... ಮನಮೋಹನ ಕೊಳಲೂದು ಮನಮೋಹನ॥ಪ॥ ಆಲಿಸುವೆ ಮೇಘ ಶ್ಯಾಮನಗಾನ ॥2ಸಾರಿ॥ ಊದೋ ಕೊಳಲೂದು ಮನಮೋಹನ-॥ಅ.ಪ.॥ ಇಡುತಾ ಬೆರಳಕುಡಿ। ನೋಟದಿ ನೋಡುತ। ಇಡುತಾ ಬೆರಳ ಕೊಂಗಳಲೂದುತಾ। ಆನಂದದಿಂದಲಿ ಸ್ವರವೆತ್ತಿಪಾಡುತಾ ॥2ಸಾರಿ॥1॥ ಯಮುನಾ ತೀರದಿ ಗೋಗಳ ಕಾಯ್ದು ಗೋಪಿಕಾ ಜನರೆಲ್ಲರ ಪ್ರಜ್ಞವನೆ ಸೆಳೆದು ಆನಂದದಿಂದಲಿ ಸ್ವರವೆತ್ತಿ ಕುಣಿಯುತ॥2॥ ಗಂಗಾತೀರದಿ ಪ್ರಭುಗಿರಿ ದಡದಿ। ಕಂಗೊಳಿಪ ಜಗದರಸು ಮುರಾರಿ। ರಂಜಿಸುವೆ ಮೇಘ ರಂಗವಿಠ್ಠಲ ಕೃಷ್ಣ॥2 ಸಾರಿ॥ ॥3॥

**ಕರೆಯುವೆನಾ ಗೋಪಾಲನಾ** **ರಾಗ: ಹಿಂದೋಳ**

ಕರೆಯುವೆನಾ ಗೋಪಾಲನಾ... ಮುರಳಿಯ ಗಾನವ ಕೇಳುವೆನಾ॥ಪ॥ ಗೋಕುಲದಲ್ಲಿ ಹುಟ್ಟಿ ಗೋವ್‌ಗಳನ್ನೇ ಕಾಯ್ದ ಗೊಲ್ಲರ ರಾಧಾಕೃಷ್ಣ ಬೇಗನೆ ಬಾರೋ॥1॥ ಯಮುನಾ ತೀರದಿ ಪೊಂಗೊಳಲೂದುತ ಮಧುರೆಯ ಶ್ರೀಕೃಷ್ಣ ಬೇಗನೆ ಬಾರೋ॥2॥ ತಾಯಿಗೆ ಬಾಯಲಿ ಜಗವನ್ನೇ ತೋರಿದ ಜಗದೋದ್ಧಾರನೆ ... ಬೇಗನೆ ಬಾರೋ॥3॥

**ಕಲ್ಲು ಕಂಭವೆಲ್ಲ ಕೇಳುತಲಿಹುದಯ್ಯ** **ರಾಗ:ಪುನ್ನಾಗವರಾಳಿ**

ಕಲ್ಲು ಕಂಭವೆಲ್ಲ ಕೇಳುತಲಿಹುದಯ್ಯ ಕೃಷ್ಣನ ಕೊಳಲಿನ ಗಾನ। ಆ.... ಆ.... ಕೃಷ್ಣನ ಕೊಳಲಿನ ಗಾನ॥ಪ॥ ಸುರವರರೆಲ್ಲರೂ ಅಂಬರದಿ ಸುಲಲಿತ ಗಾನವ ಮಾಡುತಲಿ। ಹರಿ ನಿನ್ನ ಪಾಡಿ ಕೊಂಡಾಡುತಲಿ ಕರೆಯುವರೋ ಹೂ ಮಳೆಯನ್ನು॥1॥ ನೀರಿಗೆ ಬರುವ ನಾರಿಯರೆಲ್ಲ ದಾರಿಯೊಳೆಲ್ಲಾ ನಿಂದಿಹರೋ। ತಲೆಯ ಮೇಲಿನ ಕೊಡ ಉರುಳಿ ಬೀಳುತಲಿದೆ। ಹರಿನಿನ್ನ ಗಾನದ ಮಹಿಮೆಯದೋ॥2॥ ಗಾನ ಲೋಲ ನಿನ್ನ ಗಾನದ ಮಹಿಮೆಯ ಏನೆಂದು ಬಣ್ಣಿಸಲಳವಲ್ಲ। ಶರಣಾಗತ ಸಂರಕ್ಷಕ ಹರಿಯೆ। ಕರುಣಿಸೋ ನೀ ಭಕ್ತ ಸುರಧೇನು॥3॥

**ಕೊಳಲನೂದಿ ನಗುತ ಬಂದ** **ರಾಗ: ಸಿಂಧೂಭೈರವಿ**

ಕೊಳಲನೂದಿ ನಗುತ ಬಂದ ದೇವಕಿ ಕಂದ ಬಂದನೆ॥ಪ॥ ಅಳಲದೂರ ಮಾಡಿ ತಂದ ಆನಂದಾಮೋದವ। ಗೋವುಗಳನ್ನು ಕುಣಿಸಿದ ಗೋಕುಲವನ್ನು ತಣಿಸಿದ। ನಂದಕುಮಾರ ನವನೀತ ಚೋರ ಬೃಂದಾವನಲೋಲ॥ಅ.ಪ॥ ಗೋವರ್ಧನ ಗಿರಿ ಎತ್ತಿದಾ ಗೋಕುಲನಂದನ ಗೋಪಾಲ। ಕಾಳಿಂಗನ ಮೆಟ್ಟಿದಾ ದೇವಕಿಕಂದ ಗೋವಿಂದಾ। ಯಮುನೆಯ ತೆರೆತೆರೆ ಕಲರವಕೆ ಕೊಳಲಿನ ಇಂಚರ ಸಿಂಚಿಸಿದ। ನಂದಕುಮಾರ ನವನೀತಚೋರ ಬೃಂದಾವನ ಲೋಲ॥1॥ ಮಾವ ಕಂಸನ ಶಿರಮುರಿದ ಸಜ್ಜನ ಪ್ರೇಮಿ ಗೋಪಾಲ। ಪಾಂಡು ಪುತ್ರ ಪರ ಒಲಿದಾ ಭಾಗವತ ಪ್ರಿಯ ಗೋವಿಂದ। ಪ್ರೇಮದಿ ಕರೆದ ವಿದುರನಿಗೆ ಪ್ರೀತಿಯಿಂದಲಿ ತಾ ಒಲಿದ। ನಂದಕುಮಾರ ನವನೀತ ಚೋರ ಬೃಂದಾವನ ಲೋಲ॥2॥

**ಕೊಳಲನೂದಬೇಡವೋ ನಳಿನಾಕ್ಷನೆ** **ರಾಗ:ಪೂರ್ವಿಕಲ್ಯಾಣಿ**

ಕೊಳಲನೂದಬೇಡವೋ ನಳಿನಾಕ್ಷನೆ।।ಪ।। ಕೊಳಲನೂದಲು ಎಳೆ ಕರುಗಳು ತಾಯ ಮೊಲೆಯನುಣ್ಣದೆ ಆ ಸ್ಥಳವ ಬಿಟ್ಟೋಡುವುದಲ್ಲೋ।।1।। ಸಿರಿರಮಣನೆ ನಿನ್ನ ಮುರುಳಿಯ ಸ್ವರ ಕೇಳಿ ತರಳೆಯರು ತಮ್ಮ ಮಕ್ಕಳ ಬಿಟ್ಟೋಡುವರಲ್ಲೋ।।2।। ಸಿಂಧು ಶಯನ ದೇವ ವಂದಿಸುವೆನು ನಿನ್ನ ದಯಾದಿಂದ ನಿಲ್ಲಿಸೋ ಕೊಳಲನು ದೇವರ ದೇವ।।3।।

**ಕೊಳಲನೂದಿ ಮೋಹಿಪುದನು ಕಲಿಸು** **ರಾಗ: ಕಾನಡ**

ಕೊಳಲನೂದಿ ಮೋಹಿಪುದನು ಕಲಿಸು ಎನಗೆ ಚೆನ್ನ। ತಳಮಳಿಪುದು ಎನ್ನ ಎದೆಯು ಕೊಳಲಗಾನ ನಿನ್ನ।।ಪ।। ನಲಿಯುತಿಹುದು ಉದಯಗಗನ ಉದಯರಾಗದಿಂದ। ಕೊಳದಲೆಗಳು ಕುಣಿಯುತಿಹವು ಗಾನದೊಲುಮೆಯಿಂದ।।1।। ಪರವಿಹಗಳ ನಲಿಸುತಿಹುದು ನಿನ್ನ ಕೊಳಲ ನಾದ। ಪರವಿಹಗಳ ನೊಲಿಸುತಿಹುದು ನಿನ್ನ ಗಾನಮೋದ।।2।। ತಳಿತ ಚೂತದಡಿಯೆ ಮೊದಲ ನುಡಿಯ ಕಲಿಸು ಚೆನ್ನ ಕೊಳಲು ಕಲಿಸು ಬೇಗ ಎನಗೆ ಮೋಹಿಸುವೆನು ನಿನ್ನ।।3।।

**ಕೊಳಲನೂದುವನ್ಯಾರೆ ಬೃಂದಾವನದಲ್ಲೀ** **ರಾಗ: ಪೂರ್ವೀ ಕಲ್ಯಾಣಿ**

ಕೊಳಲನೂದುವನ್ಯಾರೆ ಬೃಂದಾವನದಲ್ಲೀ।।ಪ।। ಕೊಳಲನೂದುವನ್ಯಾರೆ ನಳಿನಾಕ್ಷಿ ನಾರೀಮಣೀ। ಸಡಗರದಿಂದ ಬಂದೂ। ಸೆರಗು ಸೆಳೆದು ಪೋದ।।1।। ಯಮುನಾತೀರದಿ ಕೃಷ್ಣ। ಗೋಪಿಯರೊಡಗೂಡಿ। ಗೋಪಿ ಮುದ್ದೂ। ಬಾಲಾ ಕೃಷ್ಣ ಸೆರಗು ಸೆಳೆದು ಪೋದ।।2।। ಚೆಂಡನಾಡುವನ್ಯಾರೆ ಚಂಪಕಾವನದಲ್ಲಿ। ಶಶಿಮುಖಿಯ ನೀತ ಪ್ರಿಯ ಸೆರಗು ಸೆಳೆದು ಪೋದ।।3।। ಗೋಕುಲದಲ್ಲಿ ಕೃಷ್ಣಾ। ಗೋವ್ಗಳನು ಕಾಯುತಿರಲು। ಗೋಪಿ ಮುದ್ದೂ ಬಾಲಾ ಕೃಷ್ಣ ಸೆರಗು ಸೆಳೆದು ಪೋದಾ।।4।।

**ಕೊಳಲೂದುವ ಚತುರನು**

ಕೊಳಲೂದುವ ಚತುರನು ಯಾರೆ।।ಪ।। ಘಳಿಲಾನೆ ಈಗ ಧ್ವನಿ ಕೇಳುತ್ತಿದೆ। ನಳಿನಾಮುಖಿಯೆ ಬಾಬಾ ಪೋಗೋಣ।।1।। ಸರಸಿಜ ನಮ್ಮ ಸಕಲಾಗೋಪಾಲ। ತುರುಗಳ ಕಾಯ್ವ ಕಾದುಂಬರಾನು।।2।। ನವರತ್ನದ ಕೊಳಲನ್ನು ಪಿಡಿದು। ನುಡಿಸಿ ಪಾಡುವನೀತ ಸಡಗಾರದಿಂದ।।3।।

**ಕೊಳಲನೂದುತ ಬಾ2 ನಳಿನಾಕ್ಷನೇ** **ರಾಗ:ಕಾನಡ**

ಕೊಳಲನೂದುತ ಬಾಬಾ ನಳಿನಾಕ್ಷನೇ।।ಪ।। ಕೊಳಲ ನೀನೂದುತಿರೆ। ಎಳೆಕರುಗಳು ತಾಯ। ಹಾಲು ಕುಡಿಯೋದು ಬಿಟ್ಟು। ಆಲೈಸುತಿರ್ಪುದು।।1।। ಕಾಲಂದಿಗೆ ಗೆಜ್ಜೆ। ಜಣಜಣರೆನುತಲಿ। ಲೀಲೆಯಿಂ ಪೊಂಗೊಳನೂದುತ್ತ ಬಾರೋ।।2।। ಗೊಲ್ಲ ಗೋಕುಲದಲ್ಲಿ। ಬಾಲಕರೊಡಗೂಡಿ। ಪಾಲು ಮೊಸರು ಬೆಣ್ಣೆ। ತಿಂದು ತೇಗಿದ ಕೃಷ್ಣ।।2।।

**ಕೊಳಲೂದುತ ಬಾ2** **ರಾಗ:ಹಿಂದೋಳ**

ಕೊಳಲೂದುತ ಬಾಬಾ। ದಾರಿ ಸಾನಿದ ಪದ ಪಸ ಎನುತಲಿ। ಬಾರೋ ಗೋಪಾಲ। ಕೃಪಾಲವಾಲ ಶ್ರೀ ಲೋಲ।।ಪ।। ಗೋವುಗಳನೂ ಕಾಯ್ದುಕೊಳಲ। ಹಾವ ಮದವಂ ಮುರಿದ ಕೊಳಲ। ಮಾವನನ್ನೇ ತರಿದ ಕೊಳಲ। ದೇವಲೋಕವೇ ಪೊಗಳುವ ಕೊಳಲ।।1।। ದೂತಪುರಿಯನ್ ಆಳ್ವ ಕೊಳಲ। ನೀತಿಯಂ ಬೋಧಿಸುವ ಕೊಳಲ। ಮಾತೆ ದೇವಕಿ ಇತ್ತ ಕೊಳಲ। ಮಾನವ ಮೋಹಿಪ ಕೊಳಲ।।2।।

**ಕೊಳಲೂದೋ ಇನ್ನೊಮ್ಮೆ ರಂಗಯ್ಯ (ದೇವರನಾಮು)** **ರಾಗ: ಕಾನಡ**

ಕೊಳಲೂದೋ ಇನ್ನೊಮ್ಮೆ ರಂಗಯ್ಯ॥ಪ॥ ಕೊಳಲೂದೋ ಮತ್ತೊಮ್ಮೆ ಕೃಷ್ಣಯ್ಯಾ॥ ಕೊಳಲೂದೋ ದ್ವಾರಕನಿಲಯನೆ॥ಅ.ಪ॥ ವಾಮಬಾಹುಕೃತ ವಾಮಕಪೋಲೇ ವಲ್ಗಿತ ಭ್ರೂ ಅಧರಾರ್ಪಿತ ವೇಣುಃ। ಕೋಮಲಾಂಗುಲಿಭಿರಾಶ್ರಿತ ಮಾರ್ಗಂ ಗೋಪ್ಯೈರ್ಯಯತಿಯತ್ರ ಮುಕುಂದ॥1॥ ಎಡ ಹೆಗಲಲಿ ಎಡಗಲ್ಲವನಿಕ್ಕಿ ಕುಡಿಹುಬ್ಬುಗಳಲ್ಲಾಡುತ್ತಾ। ಮೃದುತರ ತುದಿ ಬೆರಳಿಂದೊತ್ತುತ ಮಧುರಾಧರದಲ್ಲಿಟ್ಟು ಕೃಷ್ಣಯ್ಯ। ನಾದ ಮೂರುತಿ ಗೋಪಿಜನ ಲೋಲ ಶ್ರೀದವಿಠಲ ಗೋಪಾಲ ಬಾಲ॥2॥

**ಕೊಳಲೂದೋ ರಂಗಯ್ಯ (ದೇವರನಾಮು)** **ರಾಗ:ಪೂರ್ವಿಕಲ್ಯಾಣಿ**

ಕೊಳಲೂದೋ ರಂಗಯ್ಯ ರಂಗ ನೀ ಕೊಳಲೂದೊ ಕೃಷ್ಣಯ್ಯ॥ಪ॥ ಕೊಳಲೂದೋ ಗೋವಳರೊಡಗೂಡಿ ಚೆಲುವ ಶ್ರೀ ವೇಣುಗೋಪಾಲ ಕೃಷ್ಣನೀ॥1॥ ಕಡಲೊಳಗಿದ್ದು ಬಂದ್ದಡಗದಿಂದಲಿ ಕಡಗೋಲ ಪಿಡಿದ ಉಡುಪಿಯ ಕೃಷ್ಣ ನೀ॥2॥ ಎಂಟು ಮಧ್ವಂತಿವರ್ಯರು ನಿನ್ನ ಸೇವೆಗೆ ಬಂಟರಾಗಿಹರೈ ವೈಕುಂಠಪತಿ ಕೃಷ್ಣ ನೀ॥3॥ ನಿಜಭಕ್ತರು ಕೈ ಬೀಸಿ ಕರೆಯಲು ರಜತಪೀಠದ ಪುರವಾಸ ಕೃಷ್ಣ ನೀ॥4॥ ಸತ್ಯವಾದ ಜ್ಞಾನ ಪೂರ್ಣಾನಂದ ತೀರ್ಥರ ಕರವಶವಾದ ಕೃಷ್ಣ ನೀ॥5॥ ಅಂದಿಗೆ ಕಿರುಗೆಜ್ಜೆ ಘಲು ಘಲ್ಲೆನ್ನುತ ಕಾಂಳಿಂಗನ್ಹೆಡೆಯಲಿ ಕುಣಿದಾಡೋ ಕೃಷ್ಣ ನೀ॥6॥ ದಾಸರ ಮನದಭಿಲಾಷೆ ಪೂರೈಸಿ ಭೀಮೇಶಕೃಷ್ಣನೆ ದಯಮಾಡೋ ರಂಗ ನೀ॥7॥

**ಕೊಳಲನಾದ ಕೇಳಿ ರಾಧೆ** **ರಾಗ:ಶಂಕರಾಭರಣ**

ಕೊಳಲನಾದ ಕೇಳಿ ರಾಧೆ। ಮನೆಯ ಕೆಲಸ ಬಿಟ್ಟು ಓಡಿ। ತನ್ನಯ ಶ್ರೀ ಕೃಷ್ಣನೆಡೆಗೆ। ನಡೆದಳಾಗ ಬೇಗನೆ॥1॥ ಮೈಯ ಮರೆತು ಮುದದಿ ಬಾಲೆ। ಮನವ ಸೋತು ನಾದದಲ್ಲೆ। ಹೆಜ್ಜೆಯಿಡುತ ನವಿಲಿನಂತೆ। ನಡೆದಳಾಕೆ ಮೋಹದಿಂದ॥2॥ ಕೊಳಲ ತುಟಿಯ ಮೇಲೆ ಇಟ್ಟು। ಕೃಷ್ಣನಾಗ ಪ್ರೀತಿ ತೋರೆ। ಸುರಿಯಿತಾಗ ಪ್ರೇಮಧಾರೆ। ಶ್ರೀರಾಧೆಯ ವದನದಲ್ಲೆ॥3॥

**ಕೊಳಲೇನು ಪುಣ್ಯವ ಮಾಡಿತ್ತು** **ರಾಗ:ಮುಖಾರಿ**

ಕೊಳಲೇನು ಪುಣ್ಯವ ಮಾಡಿತ್ತು। ಕೃಷ್ಣನ ಕರವಸೇರಿತೇ। ಕರವಸೇರೀತೇಬಲು। ಸ್ಮರಣೆ ಗೊಂಡೀತೇ॥ಪ॥ ಪಂಕಜಾಕ್ಷನ ಕೈಲಿಕೊಳಲು। ಮುಂಚೆ ತಿಳಿದೀತೇ। ಮುಂಚೆ ತಿಳಿದೀತೇ। ಬಹುಭ್ರಾಂತಿಗೋಂಡೀತೆ॥1॥ ವಾರಿಜಾಕ್ಷನ ಮುಖಕೆ ಹೋಗಿ ಬೇಡಿಕೊಂಡೀತೇ। ಬೇಡೀಕೊಂ ಡೀತೇ। ಬಲು ಸ್ಮರಣೆಗೊಂಡೀತೇ॥3॥ ಕಂತುಪಿತನ ಕೈಲಿ ಕೊಳಲುಭ್ರಾಂತಿಗೊಂಡೀತೇ। ಭ್ರಾಂತಿಗೋಂಡೀತೆ। ಬಲು ಮರುಕಗೊಂಡೀತೇ॥3॥

**ಗಾಯತಿ ವನಮಾಲೀ ಮಧುರಂ** **ರಾಗ: ಜುಂಜೋಟಿ**

ಗಾಯತಿ ವನಮಾಲೀ ಮಧುರಂ ॥ಪ॥ ಪುಷ್ಪಸುಗಂಧ ಸುಮಲಯ ಸಮೀರೇ। ಮುನಿಜನ ಸೇವಿತ ಯಮುನಾತೀರೇ ॥1॥ ಕೂಜಿತ ಶುಕಪಿಕ ಮುಖಖಗ ಕುಂಜೇ। ಕುಟಿಲಾಲಕ ಬಹು ನೀರದ ಪುಂಜೇ॥2॥ ತುಲಸೀಧಾಮ ವಿಭೂಷಣ ಹಾರೀ। ಜಲಜಭವಸ್ತುತ ಸದ್ಗುಣ ಶೌರೀ। ಪರಮಹಂಸ ಹೃದಯೋತ್ಸವಕಾರೀ। ಪರಿಪೂರಿತ ಮುರಳೀರವಕಾರೀ॥3॥

**ಪುಲ್ಲಾಂಗುಳಲ್ ಕುಡುತ್ತ ಮೂಂಗಿಲ್‌ಗಳೆ (ತಮಿಳು)** **ರಾಗ: ಶಿವರಂಜನಿ**

ಪುಲ್ಲಾಂಗುಳಲ್ ಕುಡುತ್ತ ಮೂಂಗಿಲ್‌ಗಳೆ ಎಂಗಳ್ ಪುರುಷೋತ್ತಮನ್ ಪುಗಳ್ ಪಾಡುಂಗಳೇ ವಂಡಾಡುಂ ಗಂಗೈ ಮಲರ್ ತೋಟ್ಟಂಗಳೆ ಎಂಗಳ್ ಮಧುಸೂಧನನ್ ಪುಗಳ್ ಪಾಡುಂಗಳೇ॥1॥ ಪಾಂಚಾಲಿ ಪುಗಳ್‌ಕಾಕ್ಕ ತನ್ಕೈ

ಕೊಡುತ್ತಾರ್ ಅಂಡ್ರು ಭಾರತ ಪೋರ್ ಮುಡಿಕ್ಕ ಶಂಗೈ ಎಡುತ್ತಾರ್ ಪಾಂಡವರ್‌ಕು ಉರಿಮೈವುಳ್ಳ ಪಂಗೈಕೊಡುತ್ತಾರ್ ನಾಮ್ ಪಡಿಪ್ಪದರ್‌ಕು ಗೀತೈ ಎನ್ನುಂ ಪಾಡಂ ಕೊಡುತ್ತಾರ್।।2।। ಗುರುವಾಯೂರ್ ತನ್ನೀಲ್ ಅವನ್ ತವಳ್‌ಕಿನ್ರವನ್ ಒರು ಕೊಡಿಯೋಡ ಮಥುರಾವೈ ಆಳ್‌ಗಿನ್ರವನ್। ತಿರುವೇಂಗಡತ್ತಿಲ್ ಅವನ್ ಅರುಳ್‌ಗಿನ್ರವನ್। ಅಂದ ಶ್ರೀರಂಗತ್ತಿಲ್ ಪಳ್ಳಿಕೊಳ್‌ಗಿನ್ರವನ್2।।3।। ಪನ್ನೀರ್ ಮಲರ್ ಚೊರಿಯುಂ ಮೇಘಂಗಳೆ ಎಂಗಳ್ ಪರಂಧಾಮನ್ ಮೈ ಅಳಗೈ ಪಾರುಂಗಳೇ। ತೆನ್ ಕೋಡಿ ತೆನ್ರಲ್ ತರುಂ ರಾಗಂಗಳೇ। ಎಂಗಳ್ ಶ್ರೀಕೃಷ್ಣನ್ ಮೂರ್ತಿಪುಗಳ್ ಪಾಡುಂಗಳೇ2।।4।।

**ಪೊಂಗೊಳಲನೂದುತಿಹ ಯದುಕುಲೋತ್ತುಂಗ(ದೇವರನಾಮ) ರಾಗ:ಕಾಮವರ್ಧಿನಿ, ಅಟ್ಟತಾಳ**

ಪೊಂಗೊಳಲನೂದುತಿಹ ಯದುಕುಲೋತ್ತುಂಗ।।ಪ।। ಪೆಂಗಳಾಪಾಂಗ ನೀರಾಜಿತ ಶುಭಾಂಗ।।ಅ.ಪ.।। ಸಲಿಲಗಾಚಲಧರನೆ ಇಳೆಯಾಣ್ಮ ಜ್ವಲನೇತ್ರ ಬಲಿಯ ಬೇಡಿದೆ। ಭೃಗುಕುಲಜನೆನಿಸಿ ಬಲಿದ ಬಿಲ್ಲನೆ ಮುರಿದು। ಲಲನೆಯರ ವಶನಾಗಿ ಖಳರ ಸಂಬೋಧಿಸಿದೆ। ಚೆಲುವ ಹಯವೇರಿ।।1।। ಬಿಡದೆ ನೋಡಿದೆ ಬೆಟ್ಟದಡಿಗೆ ಬೆನ್ನನು ಕೊಟ್ಟೆ। ಅಡವಿಚರ ಕಡುಕೋಪಿ ಕೊಡೆಯ ಪಿಡಿದು। ಕೊಡಲಿಕೈ ಜಡೆಧರಿಸಿ ಗಿಡಹತ್ತಿ ಕೆಡಿಸಿ। ಸನ್ಮಡದಿಯರ ಹಯವೇರಿ ಕಡಿದೆ ರಣಶೂರ।।2।। ವಾರಿಚರ ಕೂರ್ಮಾವತಾರ ಸೂಕರ ಹರಿಯೆ। ಧಾರುಣಿಯನಳೆದೆ ಶೂರರನು ಗೆಲಿದೆ। ನೀರಜಾಕ್ಷಿಯ ತಂದೆ ಚೋರ ವ್ರತವನಳಿದೆ। ಹಯವೇರಿದನೆ ಪುರಂದರವಿಠಲ ಜಗದಯ್ಯ।।3।।

**ಬನ್ಸೀಧರ ಕನ್ಹಯ್ಯಾ ಘನಶ್ಯಾಮ (ಹಿಂದಿ) ರಾಗ: ಮೋಹನ**

ಬನ್ಸೀಧರ ಕನ್ಹಯ್ಯಾ ಘನಶ್ಯಾಮ ಸುಂದರ। ಗಿರಿಧಾರಿ ಗೋಪಬಾಲ, ಬೃಂದಾವನ ವಿಹಾರ।।ಬನ್ಸೀ।। ಗೋವಿಂದ ಮಾಧವ ಹೇ ಮಧುಸೂಧನ ಮುಕುಂದ 2, ರಾಧೆ ಗೋಪಾಲ ರಾಧೆ ಗೋಪಾಲ, ರಾಧೆ ಗೋಪಾಲ ರಾಧೆ।।

**ಮನಸೋತು ವೇಣುಗಾನಕೆ ಸನಿಹದಲಿ ರಾಗ:ಕಾಪಿ**

ಮನಸೋತು ವೇಣುಗಾನಕೆ। ಸನಿಹದಲಿ ನಿಂತಳು ರಾಧೆ। ದೃಷ್ಟಿಯಲಿ ಸ್ವರೂಪವ ಕಂಡು। ಹೃದಯ ದಾಹವ ತೋರಿದಳು ನಿಂದು।।1 ಚಿಂದುಟಿಗೆ ತಾಗಿಕೊಂಡು। ತುದಿ ಬೆರಳಲಿಸೇರಿರುವ। ನೋಡಿ ಬಿರುದು ಕೊಳಲನ್ನು। ನಿಂತಳಾಗ ಮೈ ಮರೆದು।।2।। ಮೋಹನನಾಗ ಮುದದಿಂದ। ಪ್ರೀತಿಯನ್ನು ತುಂಬಿಕೊಂಡು। ಹುಸಿ ನಗೆಯ ಚಿಮ್ಮಿ ತೋರುತಾ। ಶ್ರೀ ಅನುರಾಗವನು ತುಂಬಿದಾ।।3।।

**ಮಾಯದಂತ ಕೊಳಲನೂದುವ ರಾಗ: ಮಿಶ್ರಮಾಂಡ್**

ಮಾಯದಂತ ಕೊಳಲನೂದುವ ನಮ್ಮ ಕೃಷ್ಣ। ಮಾಯದ ಜಗವ ತೊರೆದು ಪರಗತಿಯ ಪಡೆಯಲು।।ಪ।। ಜ್ಞಾನವನ್ನು ಧಾರೆಯಾಗಿ ನಾದದಲ್ಲಿ ತುಂಬುತಾ। ಸದ್ಗತಿಯ ಪಡೆಯಲು। ಸದ್ಗುರುವ ನಮಗೆ ಕೊಟ್ಟು। ತನುಮನಗಳ ಬಾಧಿಪ ವ್ಯಾಧಿಗಳ ಪರಿಹರಿಸಲು।।1।। ದುಷ್ಟರ ಖಂಡಿಸಿ ಶಿಷ್ಟರ ಪೊರೆಯಲು ಅಲೆದಾಡುವ ಮನಕೆ ಏಕಾಗ್ರತೆಗೊಳಿಸಲು।।2।। ಅವನಲ್ಲಿ ಸೆಳೆವ ಕೊಟ್ಟು ಭಕ್ತಿ ಮುಕ್ತಿ ನೀಡಲು। ನಂಬಿದ ಗುರುದಾಸಗೆ ವಾಂಛಿತ ಫಲ ನೀಡಲು।।3।।

**ಮುರಳಿಯ ನಾದದಿ ಮೋಹಿತಳಾದೆ ರಾಗ: ಮೋಹನ**

ಮುರಳಿಯ ನಾದದಿ ಮೋಹಿತಳಾದೆ। ಮುರಳಿಯ ಮಿಡಿದಾ ಮಾಧವಗೆ। ಮುರಳಿಯ ನಾದದ ಮಂಗಳರವವು। ಮನಸಲಿ ಮುದವಾಗಿ ಹಾಡುತಿದೆ।।1।। ಮುರಳಿಯ ನಾದದಿ ಮೋಹನರಾಗದ। ಮಧುರ ತರಂಗವು ಅಲೆಯುತಿದೆ। ಮಾಮರ ಕೋಗಿಲೆ ಕೂಗುತಿದೆ। ಮಾರನ ಸಂಕೋಲೆ ಸೆಳೆಯುತಿದೆ।।2।। ಕೊಳಲಿನ ಲಹರಿಗೆ ಪರವಶಳಾಗಿಹೆ। ಕೇಳದೆ ಮೋಹನ ಎನ್ನಾಲಾಪವು। ಕೇಶವನೇ ಬಾಲಹನುಮನ ಸ್ವಾಮಿಯೇ। ಕೈಹಿಡಿದೆನ್ನನು ನಡೆಸು ಮನೋಹರ।।3।।

**ಮುರಳಿಯನೂದಿದ ಮುರಳಿಯಲೋಲನು** **ರಾಗ: ಶುಭಪಂತುವರಾಳಿ**

ಮುರಳಿಯನೂದಿದ ಮುರಳಿಯಲೋಲನು ವಿಧವಿಧ ರಾಗದಿ ಇಂಪಾಗಿ। ಗಂಧರ್ವಾದ್ಯರು ಅಮರರು ಕೇಳಲು ನೆರೆದರು ಗಗನದಿ ಸಾಲಾಗಿ॥1॥ ಮುರಳಿಯ ನಾದವ ಕೇಳಿದ ಬಾಲರು ಕೃಷ್ಣನು ಕರೆಯುವನೆಂದೆನುತ। ಆಟವನಾಡಲು ಎಲ್ಲರು ಬಂದರು ಸಂತಸದಲಿ ನಗುನಗುತ॥2॥ ಮುರಳಿಯ ನಾದದ ಮಾಧವ ಕರೆಯುವ ತನ್ನನು ಎನುತ ಆ ಯಮುನೆ। ಹಿಗ್ಗುತ ಹರುಷದಿ ಆ ಹರಿಪಾದವ ತೊಳೆಯಲು ಬಂದಳು ಕರೆದೊಡನೆ॥3॥ ವೇದದ ಶಾಸ್ತ್ರದ ಅರ್ಥವ ಹೇಳುತ ಕರೆಯುವ ತಮ್ಮನು ಎಂದೆನುತ। ಮುನಿಗಳು ಯತಿಗಳು ಮುರಳಿಯ ಕೇಳುತ ಬಂದರು ಹರಿಯನು ವಂದಿಸುತ॥4॥ ನ್ಯಾಯದಿ ನಡೆಯಿರಿ ಸತ್ಯವ ನುಡಿಯಿರಿ ಧರ್ಮವ ಬಿಡದೆಲೆ ಎಂದೆನುತ। ಎಲ್ಲ ಮನುಜರಿಗೂ ಹೇಳಿದನಾ ಹರಿ ಮೋಹದ ಮುರಳಿಯ ಬಾರಿಸುತ॥5॥

**ಮುರುಳಿಯನೂದುತ್ತ ಮನವನ್ನು ಸೆಳೆಯುತ್ತ** **ರಾಗ:ಹಿಂದೋಳ**

ಮುರುಳಿಯನೂದುತ್ತ। ಮನವನ್ನು ಸೆಳೆಯುತ್ತ। ಮನಮೋಹನ ಕೃಷ್ಣ। ತಾ ಬಂದನೇ॥ಪ॥ ಕರೆಕೇಳಿ ಭಕುತರ ಕರುಣಾದಿ ನೋಡುತ್ತ। ಕುಣಿಯುತ್ತ ನಲಿಯುತ್ತ ತಾ ನಿಂದನೇ॥ಅ.ಪ॥ ಹಿಂದೋಳರಾಗದಿ। ಚಂದದಿ ಪಾಡುತ। ಬೃಂದಾವನದೊಳು। ನಿಂದನು ಆಡುತ। ಅಂದುಗೆ ಕಿರುಗೆಜ್ಜೆ। ಘಲುಘಲುರೆನ್ನುತ।ನಂದಾನ ಕಂದನು ಬಂದಾನು ಕುಣಿಯುತ್ತ॥1॥ ಚಂದದಿ ವಸಂತ ಪಾಡುತ ನಿಂದನು। ಸುಂದರಿ ರಾಧೇಯ ಮೆಚ್ಚುತ ಬಂದನು। ಚಂದನ ಶೋಭಿತ ಚಂದಿರ ವದನನು। ನಂದ ಯಶೋಧೆಗೆ। ಸಂತಸವಿತ್ತನು॥2॥ ಮಾರನ ಜನಕನು ಮೋಹನ ನುಡಿಸಲು। ಮೋಹದ ರಮಣಿ ರಮಣಿಯರ್ ಕುಣಿದರು ಮುದದಲೀ। ಮೋದದಿ ನಾರದ ಗಾನದಿ ಸ್ತುತಿಸಲು ಮೇದಿನಪಾಲಕ ನಲಿದನು ಮನದಲಿ॥3॥

**ಮುರಳಿಯ ಲೋಲನು ಗೋವಿಂದನು** **ರಾಗ: ಸಿಂಧುಭೈರವಿ**

ಮುರುಳಿಯ ಲೋಲನು ಗೋವಿಂದನು। ತನ್ನ ಅನುರಾಗ ಎಲ್ಲೆಡೆ ಬೀರುವನು॥ಪ॥ ಕರುಣಾಳು ಎಂಬುವ ಬಿರುದನ್ನೇ ಧರಿಸಿ। ಹರುಷದಲಿ ಧರೆಯನ್ನೇ ಪೊರೆಯುವನು॥ಅ.ಪ.॥ ಮಗುವಾಗಿ ತೊಟ್ಟಿಲಲಿ ಮಲಗುವನು। ಜಯಗೈದು ಶಂಖವನು ಧ್ವನಿಗೈವನು॥ ವೀರನೋಳ್ ಚಕ್ರವನ್ನು ಪಿಡಿದಿಹನು। ಸಾಧುವಂತೆ ಬೋಧನೆ ಗೈಯುವನು॥1॥ ಕಳ್ಳನಂತೆ ಕಣ್ಣನ್ನು ಮಿಡಿಯುವನು। ಬೆಣ್ಣೆಕದ್ದು ಮೆಲ್ಲುತಾ ನಲಿಯುವನು। ಭಕ್ತರಾ ಮನದಲ್ಲಿ ನೆಲೆಸುವನು। ವಿರಕ್ತರ ಮನೆಮುಂದೆ ನಿಲ್ಲುವನು॥2॥

**ಮುರಳೀ ಲೋಲ ಮುಕುಂದ** ರಾಗ: ಮಾಂಡ್

ಮುರಳೀ ಲೋಲ ಮುಕುಂದ ಮಾಲ ಚರಣ। ಕಮಲದೇವ ಶಂಕು ಚಕ್ರಧರ॥ಪ॥ ಕರುಣಾಭರಣ ರುಕ್ಮಿಣೀಲೋಲ। ಸಿರಿಹಯವದನ। ಪರಮಪುರುಷ ಭಕ್ತವತ್ಸಲ ಭಯನಿವಾರಣನೆ। ಮುಕ್ತಿಕೊಟ್ಟು ಪಾಲಿಸೆನ್ನ ಭಗವಂತ॥1॥ ದೇವಾದಿ ದೇವನೆ ವೈಕುಂಠವಾಸನೆ ತೋರಿದೆ। ನೀನೀಗ ನಾನಾ ರೂಪವ ತಾಯಿಗೆ ಬಾಯಲಿ। ಜಗವನೇ ತೋರಿದೆ ವರವನ್ನು ಕೊಟ್ಟು ಪಾಲಿಸೆನ್ನ॥2॥

**ಯಾದವರಾಯ ಬೃಂದಾವನದೊಳು (ದೇವರನಾಮ)** **ರಾಗ: ಕಾಮವರ್ಧಿನಿ, ಝಂಪೇತಾಳ**

ಯಾದವರಾಯ ಬೃಂದಾವನದೊಳು ವೇಣು। ನಾದವ ಮಾಡುತಿರೆ॥ಪ॥ ರಾಧೆ ಮುಂತಾದ ಗೋಪಿಯರಲ್ಲಿ ಮಧು। ಸೂದನ ನಿನ್ನನು ಸೇವಿಸುತ್ತಿರೆ ॥ಅ.ಪ.॥ ಸುರರು ಅಂಬರದಿ ಸಂದಣಿಸಿರೆ ಅಪ್ಸರ ಸ್ತ್ರೀಯರು ಮೈ ಮರೆದಿರೆ। ಕರದಲ್ಲಿ ಕೊಳಲನೂದುತ್ತ ಪಾಡುತ್ತ ಸರಿಗಮ ಪದನಿಸ್ವರಗಳ ನುಡಿಸುತ್ತ॥1॥ ಹರಬ್ರಹ್ಮರು ನಲಿದಾಡುತ್ತಿರೆ ತುಂಬುರು ನಾರದರು ಪಾಡುತಿರೆ। ಪರಿಪರಿ ವಿಧದಲಿ ರಾಗವ ನುಡಿಸುತೆ। ತುರು ಹಿಂಡುಗಳ ಕೂಡುತ ಪಾಡುತ॥2॥ ತುರು

ಹಿಂಡುಗಳ ತರತರದಲಿ ತನ್ನ। ಕರದಿಂಬೋಳೈಸಿ ಸಂತೈಸುತಲಿ। ಅರವಿಂದದಳನಯನ ಆದಿಕೇಶವ ರಾಯ ಕರುಗಳ ಸಹಿತ ಗೋವುಗಳನ್ನೆಲ್ಲ ತಿರುಹುತ।।3।।

**ವೃಂದಾವನೀ ವೇಣುವಾಜೆ (ಮರಾಠಿ)** **ರಾಗ: ಕಾಪಿ**

ವೃಂದಾವನೀ ವೇಣುವಾಜೆ। ವೃಂದಾವನಿ ವೇಣು। ವೇಣು ಕವಣಾಚಾ ಮಾಯಾವಾಜೆ। ವೇಣುನಾದೆ ಗೋವರ್ಧನ ಗಾಜೆ।।ಪ।। ಪುಚ್ಛ ಪಸರುನಿ ಮಯೂರ ವಿರಾಜೆ। ಮಜಪಾಹತಾ ಭಾಸತಿಯಾದವ ರಾಜೆ।।1।। ತೃಣಚಾರಾ ಚರುವಿಸರಲಿ। ಗಾಯಿವ್ಯಾಘ್ರ ಖೇಕೆ ಘೂಲಿ ಠಾಯಿ। ಪಕ್ಷಿಕುಳೆ ನಿವಾಂತ ರಾಹಿಲಿ। ವೈರ ಭಾವ ಸಮೂಳ ವಿಸರಲಿ।।2।। ಧ್ವನಿ ಮಂಜುಳ ಮಂಜುಳ ಉಮಟತಿ। ವಾರೆ ರುಣ ಝುಣ ರುಣ ಝುಣ ವಾಜತಿ। ದೇವ ವಿಮಾನಿ ಬೈ ಸೋನಿ ಸ್ತುತಿಗಾತಿ। ಭಾನುದಾಸ ಧಾವ ಘೇಯೀ ಪ್ರೇಮ ಭಕ್ತಿ। ವೇಣುನಾಧೆ ಗೋವರ್ಧಗಾಜೆ (ವರ್ಧಗಾಜೆ)।।3।।

**ವೇಣುಗೋಪಾಲನ ಕೊಳಲಿನ** **ರಾಗ:ಶಿವರಂಜಿನಿ**

ವೇಣುಗೋಪಾಲನ ಕೊಳಲಿನ ಗಾನ ಕೇಳುವ ಬನ್ನಿರಿ ಸುಮಧುರ ಗಾನ।।1।। ಜೇನುದುಂಬಿಯ ಗುನುಗುನು ಗಾನ ಹೋಲುತಲಿದೆ ತಂಬೂರಿಯ ಗಾನ।।2।। ಹಕ್ಕಿಗಳಿಂಚರ ಕಿವಿಯಲಿ ಮೊಳಗುತ ನೀಡುತ ಕೊಳಲಿಗೆ ಸಹತಾನ।।3।। ಗೋವುಗಳೆಲ್ಲ ಮರೆಯುತ ಮೇವ ಆಲೈಸುತಲಿವೆ ಈ ಸುಮಗಾನ।।4।। ಕಾಡಿನ ಬಿದಿರಿದು ಕೃಷ್ಣನ ಬೆರಳಲಿ ಹೊಮ್ಮುತಲಿದೆ ಮೈ ಮರೆಯುವ ಗಾನ।।5।। ಕೃಷ್ಣನ ಕೊಳಲಿಗೆ ರಾಧೆಯ ನರ್ತನ ಮಾಡುತಲಿರೆ ಮೈ ಮರೆಸುವ ಜ್ಞಾನ।।6।।

**ಶ್ಯಾಮನೆ ಮುರಲೀ ಮಧುರ (ಹಿಂದಿ)** **ರಾಗ: ಶಿವರಂಜಿನಿ**

ಶ್ಯಾಮನೆ ಮುರಲೀ ಮಧುರ ಬಜಾಯಿ। ನಿರ್ಮಲ ಜೀವನ ಜಮುನಾ ಜಲಮೇ। ಲಹರಲಹರ ಲಹರಾಯಿ ಶ್ಯಾಮನೆ।।ಪ।। ನಿರ್ಮಲ ಗಗನ ಪವನ ನಿರ್ಮಲ ಹೇ। ನಿರ್ಮಲ ಧರತಿ ಕಾ ಅಂಚಲ ಹೇ। ನಿರ್ಮಲ ಹೇತನ ನಿರ್ಮಲ ಹೇಮನ। ನಿರ್ಮಲ ರಸಕೀ ರಾಸರಚಾಯಿ।।1।। ನಿರ್ಮಲ ಸ್ವರಮೇ ವೇಣು ಪ್ರಕಾರಿ। ಯಶೋದಸುನಿ ಯಷ ಭಾನ ಕುಮಾರಿ। ನಿರ್ಮಲ ಲೋಚನ ನಿರ್ಮಲ ಚಿತ್ತವನ। ಮನಮೇ ನಿರ್ಮಲ ಗಗನಲಕಾಯೆ।।2।।

**ಶ್ರೀಶಾ ಕೊಳಲನೂದುತ ಬಂದಾ (ದೇವರನಾಮ)** **ರಾಗ: ಮಧ್ಯಮಾವತಿ**

ಶ್ರೀಶಾ ಕೊಳನೂಲದುತ ಬಂದಾ। ಶ್ರೀಮುಕುಂದ।।ಪ।। ವಾಸವ ವಂದಿತ। ವಾತಜ ಸೇವಿತ। ವಾಸುಕಿಶಯನನು ಓರೆಯನೋಟದಿ।।ಅ.ಪ।। ಬೆರಳು ಸಂದಿಲಿ ಮುರುಳಿಯ ಪಿಡಿದು। ಮುರಾರಿ ತಾನು। ಹರುಷದಿಂದಲಿ ಸ್ವರಾವ ನುಡಿಸುತ। ಅರಳು ಮಲ್ಲಿಗೆ ಸರಗಳ ಮುಡಿದು ಕೊರಳ ಪದಕ ಹಾರಕೌಸ್ತುಭ ಧರಿಸಿ।।1।। ಗೌಳಿಪಂತು ಗೌರೀಶಭೂಷಣ। ಶೌರಿ ಸಾರಂಗ ಮೋಹನವಿಂತು। ಸುರಟಿ, ಭೈರವಿ, ಬೇಗಡೆ ನೂದುತ ನಿಂತ। ಮಾರಜನಕತಾನಂದಿಂದಲಿ ಧೀರ ಶ್ರೀಕೃಷ್ಣನು ವಿವಿಧ ಸುರಾಗದಿ।।2।। ನಾರದ ತುಂಬುರರು ನಾಟ್ಯವನಾಡೆ। ನಳಿನನಾಭನು। ಗಿರಿಜಾಪತಿಯುವಂದಿಸಿ ಬೇಡೆ। ವರಗುರು ವಂದಿತ ವಿಜಯವಿಠಲರಾಯ। ಲಲನೆಯರೆಲ್ಲರ ಹರುಷವ ಪಡಿಸುತ।।3।।

**ಸುಮಧುರ ಗಾನದ ಕೊಳಲನು** **ರಾಗ: ಅಭೋಗಿ, ಆದಿತಾಳ**

ಸುಮಧುರ ಗಾನದ ಕೊಳಲನು ಪಿಡಿದು ನಲಿಯುತ ಬಾ ಕುಣಿಯುತ ಬಾ।।ಪ।। ಗೊಲ್ಲರ ಮನೆಗಳ ಕಳ್ಳತನದಿ ಪೊಕ್ಕು। ಗುಲ್ಲು ಮಾಡುತಲವರ ಗಲ್ಲಕ್ಕೆ ಮುತ್ತಿಟ್ಟು।।ಅ.ಪ.।। ತುರುಬಿನ ಮೇಲೆ ಮೆರೆಯುತಲಿರುವ। ಮರುಗ ಮಲ್ಲಿಗೆ ಜಾಜಿ ತುಳಸಿಯ ಮಾಲೆ। ಕಿರೀಟ ಕುಂಡಲ ಹೊಳೆಯುವ ಬಾವುಲಿ। ಕಸ್ತೂರಿ ತಿಲಕವ ಹಣೆಯೊಳಗಿಟ್ಟು।।1।। ನಂದ ಗೋಕುಲದಿ ಮಂದೆ ಗೋವುಗಳ ಮುಂದೆ। ಅಂದ ಚೆಂದದಿ ನಾಟ್ಯವಾಡುತ ಬಾ। ಮಂದರೋದ್ಧಾರ ಅರವಿಂದ

ಲೋಚನ। ಸುಂದರವದನನೇ ತಂದೆ ಗೋವಿಂದ॥2॥ ಯಮುನಾ ನದಿಯ ಬಳಿಸಾರಿ ನೀ ಕಾಳಿಂಗ ಸರ್ಪದ ಫಣಿಯನು ಮೆಟ್ಟಿ। ನಾಗಕನ್ನಿಕೆಯರ ದುಗುಡ ನಿವಾರಿಸಿ। ಬಂದೆವು ನಾವು ಗೋಪಿಯರೆಲ್ಲ॥

## ಸಂಪ್ರದಾಯ

**ಕರೆತಾರೆ ಹಸೆಗೆ ಕಾಮನಯ್ಯನ** **ರಾಗ: ಯದುಕುಲಕಾಂಬೋಧಿ, ಆದಿತಾಳ**

ಕರೆತಾರೆ ಹಸೆಗೆ ಕಾಮನಯ್ಯನ। ದುರಿತಾರಿ ಶ್ರೀಶೌರಿ। ವರ ಪಾರ್ಥಸಾರಥಿಯಾ॥ಪ॥ ನಮಿಸಿ ನುತಿಸಿದಾತನಾ। ಅಮರರಿಗೊಲಿದಾತನಾ। ಸಮರಾರಿ ಮುರಾರಿ ಸಮರ್ಥಿಸಿದಾ। ಕಮಲನಯನ ಹರಿಯಾ। ಅಮಲನಯನ ದೊರೆಯಾ। ಹಿಮಕರ ಮುಖಿ॥1॥ ಅಂಧನ ಸುತ ಸೀರೆಯಾ। ಬಂದು ಸೆಳೆಯೆ ನಾರೀಯಾ। ಅಂದು ಪೊರೆದ ಮಹನೀಯ। ನಂದಾನಂದಾನೆಂದು ಬಂದು। ಸಂದರುಶನವ ತೋರೆಂದ ಹರಿಯ। ಚಂದದಿಂ ಚತುರೇ॥2॥ ಗಿರಿಧರ ಹರಿಸಿಂಧೂರ। ಪರಮ ಸುಗುಣ ಮಂದಾರ। ಪೊರೆ ಹಸನ್ಮು ಖ ಧೀರ। ಕರುಣಾ ಭರಣ ಶರಣೋದ್ಧರಣಾ। ವರ ಸರಸಿಜ ದೊರೆಯೆ ಪೊರೆ ಧರೆಯಾ। ಪರಮ ದಯಾಕರ ಚೆನ್ನಿಗನಾ॥3॥

**ಕರೆವರು ಬಾ ಮನೆಗೆ ಶ್ರೀ ಕೃಷ್ಣಾ** **ರಾಗ:ಶಿವರಂಜನಿ, ಆದಿತಾಳ**

ಕರೆವರು ಬಾ ಮನೆಗೆ ಶ್ರೀಕೃಷ್ಣಾ॥ಪ॥ ಮೂರ್ ಜಗಗಳಿಗೆ ರಾಜಾಧಿರಾಜ। ರಾಜಿಸುತ್ತಿರುವ ಸೋಜಿಗದ ಬಲು। ಸೋಜಿಗದಾ ಹಸೆಗೆ ಶ್ರೀ ಕೃಷ್ಣಾ॥ಅ.ಪ॥ ಸಾರಸಲೋಚನೆ ಭೀಷ್ಮ ಕ ಕುವರಿ ನೂರು ವಿಧದ ಬಲು ಪರಿಮಳದಾ। ಸಾರ ಕುಸುಮಗಳ ಹಾರವ ಪಿಡಿದು। ಮಾರಜನಕ ನಿನ್ನ ಕೋರುವಳು। ಗಂಭೀರದಲಿ ಹಸೆಗೆ ಶ್ರೀಕೃಷ್ಣ॥1॥ ಚಿತ್ತಜನಯ್ಯನ ಚಿತ್ತದ ರಾಣಿಯು। ಯತ್ನದಿ ನಿನ್ನನ್ನು ಕರೆದಿಹಳೋ। ಚಿತ್ರ ವಿಚಿತ್ರದ ಮುತ್ತು ರತ್ನಗಳ ಉತ್ತಮ ಪೀಠಕೆ ದಯಮಾಡೋ ದೇವಾ। ದಯಮಾಡೋ ಹಸೆಗೆ ಶ್ರೀಕೃಷ್ಣಾ॥2॥ ಯದುಕುಲನಂದನ ನೀ ಬಾರೋ। ಮಧುರಾನಾಥನೇ। ನೀ ಬಾರೋ। ಮದಗಜಗಮನನೆ ಬಾರೋ ಪ್ರಸನ್ನ। ವದನೆಯರಾರತಿ ಬೆಳಗುವರೋ ದೇವಾ। ದಯಮಾಡೋ ಹಸೆಗೆ ಶ್ರೀಕೃಷ್ಣಾ॥3॥

**ಕೃಷ್ಣಾ ಕೃಷ್ಣಾ ಬೇಗ ಬೇಗನೆ ಬಾರೋ** **ರಾಗ:ಯಮುನ್‌ಕಲ್ಯಾಣಿ**

ಕೃಷ್ಣಾ ಕೃಷ್ಣಾ ಬೇಗ ಬೇಗನೆ ಬಾರೋ। ಚಾರುಪೀಠವ ನೀನೇರೋ॥ ಧೀರಾಕರೆಯುವೆನೂ ಬಾರೋ॥ಪ॥ ಕಾಳಿಯಮಡುವನು। ಧುಮುಕಿದೆಯೋ। ಕಾಳಿಂಗನಾ ಫಣಿಯಳು ತುಳಿದೆಯೋ। ಲೋಲಲೋಚನನೆ ನೀ ಬಾರೋ॥1॥ಗೊಲ್ಲಾರ ಮನೆಗಳ ನೀಪೊಕ್ಕು ಗೊಲ್ಲತಿಯರಸೀರೆಯ ಸೆಳೆದೋ। ಕಳ್ಳನೆನಿಸಿಕೊಂಡ್ಯೋ॥2॥ ಮಾತೆಯ ವಾಕ್ಯವನೀ ಕೇಳ್ದೋ। ಭೀತಿಲಿಬಾಯನ್ನು ತೆರೆದ್ಯೋ। ಬಾಯೊಳು ಬ್ರಹ್ಮಾಂಡವನ್ನೇ ನೀ ತೋರ್ದ್ಯೋ॥3॥

**ಗೋಪಾಲ ಕೃಷ್ಣನೇ ಹರುಷದಿಂದಾ** **ರಾಗ:ಬೈರವಿ**

ಗೋಪಾಲ ಕೃಷ್ಣನೇ। ಹರುಷದಿಂದಾ ಹಸೆಗೆ ಬಾ। ಗೋಪಾಲ ಕೃಷ್ಣನೇ॥ಪ॥ ನಂದಕುಮಾರ ನವನೀತಚೋರ। ಮಂದರೋದ್ಧಾರ। ಬಂಧಭವಹರಾ। ಸಿಂಧುಶಯನಾನಂದ ವಿನುತೆ। ವಂದಿಪೆ ನಿನ್ನಾ॥1॥ ದೀನ ಬಂಧು ವೇಗವೇ। ಸುಜ್ಞಾನ ಸಿಂಧುವೇ। ಧ್ಯಾನಮಾಡುವೆ। ಧೇನುಪೊರೆಯುವೇ। ಬಾಲಾಜಿ ಕೃಷ್ಣ। ನಿನಗೆ ನಮಿಪೇ ಪೊರೆಯೋ। ಬೇಗನೇ॥2॥

**ಗೋವಿಂದ ಗೋವಿಂದ ಬಾರೆಲೊ ಹಸೆಗೆ ನೀ** **ರಾಗ:ಕಾಂಬೋಧಿ, ಮಿಶ್ರಛಾಪುತಾಳ**

ಗೋವಿಂದ ಗೋವಿಂದ ಬಾರೆಲೊ ಹಸೆಗೆ ನೀ। ಭಾಮೆಯರು ಕರೆಯುವರು॥ಪ॥ ನಂದನಾ ಕಂದನೇ। ಸಿಂಧೂರ

ಶಯನನೇ। ಮಂದರ ಗಿರಿಯಾ। ಬೆನ್ನಲಿ ಪೊತ್ತವನೇ। ಬೃಂದಾವನದಲ್ಲಿ ನಲಿದಾಡುವನೇ। ಸುಂದರಾಂಗಿಯರು ಹಸೆಗೆ ಕರೆಯುವರು।।1।। ಗೋಕುಲದಲ್ಲಿ ನೀ ಗೋವುಗಳ ಕಾಯ್ದವನೆ। ಗೋಪ ಸ್ತ್ರೀಯರ ಕೂಡೆ। ನಲಿದಾಡುವನೆ। ಶ್ರೀಪತಿ ಅರಸನೆ ರುಕ್ಮಿಣಿ ಲೋಲನೆ ಮಾಧವನೆ ಬಾರೆಂದು। ಹಸೆಗೆ ಕರೆಯುವರು।।2।। ಕೊರಳೊಳು ತುಳಸೀ। ಮಾಲೆಯ ಧರಿಸಿರುವನೇ। ಕರದಲ್ಲಿ ಶಂಖು ಚಕ್ರವ ಪಿಡಿದಿಹನೆ। ಪರಮದಯಾಕರ। ವನಿತೆಯರೊಡಗೂಡಿ। ತ್ರಿಪುರ ಸುಂದರಿಯರು। ಹಸೆಗೆ ಕರೆಯುವರು।।3।।

**ದಿವ್ಯರತುನದ ಹಸೆಗೀಗ ಬಾ2** **ರಾಗ: ಶ್ರೀ**

ದಿವ್ಯರತುನದ ಹಸೆಗೀಗ ಬಾಬಾ ದೇವ ಕರುಣಾಸಾಗರನೇ।।ಪ।। ಗೋಕುಲವಾಸ ಗೋಪಿಯಕಂದ ಆಕಳ ಕಾಯುತ ನಿಂದ। ಗೋವರ್ಧನಗಿರಿ ಎತ್ತಿದ ಧೀರ ಗೋಪಿಮನೋಹರ ಬಾರೋ।।1।। ಕಾಳಿಯ ಮಡುವನೆ ಕಲಕೀದ ಕಾಳಿಂಗಮರ್ದನ ಕೃಷ್ಣ ಕಮಲ ಮುಖಿಯರೆಲ್ಲ ಮುದದಿ ಕರೆವರ್ ಕಮಲದ್ಹಸೆಗೆ ಬಾ ।।2।। ಮಾವನ ಕೊಂದು ಮಧುರೆಲಿ ನಿಂದ ಮಧುಸೂದನನೆ ಪದುಮ ಮುಖಿಯರೆಲ್ಲ ಮುದದಿ ಕರೆವರ್ ಪದುಮದ್ಹಸೆಗೆ ಬಾ ।।3।।

**ಪಾಲಿಸು ಶ್ರೀವರನೇ ಪ್ರಸಾದವ** **ರಾಗ: ಶುಭಪಂತುವರಾಳಿ**

ಪಾಲಿಸು ಶ್ರೀವರನೇ। ಪ್ರಸಾದವ ನೀಲಹಾರ ಪ್ರಿಯನೇ। ಪಾಲಿಸು ಹೂವನು।ಕಾಲಿಗೆರಗುವೇ। ಬಾಲೆ ಲಕ್ಷ್ಮೀಕಾಂತ। ಲೋಲ ಸದ್ಗುಣವಂತಾ।।ಪ।। ನಾಗಾರಿವಾಹನನೇ। ಯೋಗಿಜನ ಯೋಗಾರ್ಚಿತಾತ್ಮಕನೇ। ನಾಗಾಶಯನ ಜಗದಾಗಮ ಕಾರಣ। ಭಾಗೀರಥಿ ಪಿತ ಬೇಗನೆ ದಯಮಾಡೊ।।1।। ಮನುಮಥ ವರಪಿತನೇ। ಸನಕಾದಿ ಮುನಿಜನ ವಂದಿತನೇ। ಅನುದಿನದೊಳು ನಿಮ್ಮ। ಮನದಿ ಧ್ಯಾನಿಸುವೆನು। ದನುಜಾಂತಕ ನಿಮ್ಮ। ಮನವಲಿದೀಗಲೇ।।2।। ಗಜರಾಜ ರಕ್ಷಕನೇ। ಧೃವನಿಗೆ ನಿಜಪದವನಿತ್ತವನೇ। ಅಜಸುರ ಮನುಮುನಿ। ಭುಜಗ ಗಂಧರ್ವರ। ಭಜನೆಯ ಕೈಗೊಂಬು। ಸುಜನ ಸಂಜೀವನೇ।।3।। ಸುರತತಿಗಮೃತ ವಿತ್ತೆ। ರಕ್ಕಸರಿಗೆ ಗರಳವನೆರೆದೆ। ಮತ್ತೆ ವರಮಹಾಲಕ್ಷ್ಮೀಯವರಿಸಿ। ಸಜ್ಜನರಿಗೆ ವರವನು ಪಾಲಿಪ ಸತ್ಯಪುರಾಧಿಪ।।4।।

**ಪೀಠಕೀಗ ಬಾರೋ ಗೋಪಿದೇವಿ ಬಾಲ** **ರಾಗ: ಕಾಪಿನಾರಾಯಣಿ, ಆದಿತಾಳ**

ಪೀಠಕೀಗ ಬಾರೋ ಗೋಪಿದೇವಿ ಬಾಲ। ಗೋಪಾಲ ಕೃಷ್ಣ ಯಶೋದೆ ಕಂದಾ।।ಪ।। ಮಥುರೆಗೆ ಪೋಗಿ ಮಾವ ಕಂಸನ ಕೊಂದು। ಉಗ್ರಸೇನನಿಗೆ ಪಟ್ಟವನ್ನು ಕಟ್ಟಿ।।1।। ಗೋಕುಲಾದಿ ಹುಟ್ಟಿ ಗೋವುಗಳನೆ ಕಾಯ್ದು। ಗೋಪಸ್ತ್ರೀಯರೊಡನೆ ರಾಸಕ್ರೀಡೆಯಾಡಿ।।2।।

**ಫಲಹಾರವ ಮಾಡು** **ರಾಗ: ಪೂರ್ವಿಕಲ್ಯಾಣಿ**

ಫಲಹಾರವ ಮಾಡು ಪರಮ ಪುರುಷನೆ।।ಪ।। ಜಲಜಾಕ್ಷಿ ಲಕುಮಿಯ ಕರಕಮಲದಿಂದ।।ಅ.ಪ।। ಕದಳಿ ಖರ್ಜೂರ ಕಾಬಾಳಿ ಕಿತ್ತಲೆ। ಸೇಬು ಬದರಿಯ ಹಲಸು ಮಾವು ದ್ರಾಕ್ಷಂಗಳು। ಮಧುರವಾದ ಮಾದಳ ತೆಂಗಿನಕಾಯಿ ಮೊದಲಾದ ಪರಿ ಪರಿ ಸುಫಲಂಗಳು।।1।। ಉತ್ತುತ್ತೆ ಜೇನು ಅಂಜೂರ ಶೇಪು ಮತ್ತೆ ದಾಳಿಂಬ ನಿಂಬೆ ಜಂಬುಗಳು। ಕತ್ತರಿಸಿದ ಕಬ್ಬು ಬಾದಾಮಿ ಗುಗ್ಗುರಿಯ ಅತ್ತಿ ಪನ್ನೇರಳೆ ನೆನೆಗಡಲೆಯು।।2।। ಹಾಲು ಸಕ್ಕರೆ ಬೆಣ್ಣೆ ತುಪ್ಪ ಸೀಕರಣೆಯು ಪಕ್ವ ರಸಾಯನ ಎಳನೀರುಗಳು। ಮೂಲೋಕದೊಡೆಯ ಹಯವದನ ವೆಂಕಟರಾಯ ಸೇವಿಸು ಶ್ರೀವರ ಕರಕಂಜದಿಂದ।।3।।

**ಬಾ ಬಾ ಬಾಲಕೃಷ್ಣ ರಾಧಾಪತೇ**

ಬಾ ಬಾ ಬಾಲಕೃಷ್ಣ। ರಾಧಾಪತೇ। ಓ ಹರಿ। ಬಾಬಾ ಬಾಲ ಕೃಷ್ಣರಾಧಾಪತೇ।।ಪ।। ಮಾನೂನಿ ದ್ರೌಪತೀ ಮಾನಭಂಗವನೆ ಕಾಯ್ದು। ರುಕ್ಮಿಣಿರಮಣನೇ। ನೀನೇ ಬಾ ಬೇಗ।।1।। ಸಣ್ಣ ಹುಡುಗ ರೊಳಾಡಿ ಬೆಣ್ಣೆಮೊಸರು ತಿಂದ।

ಸಣ್ಣ ಹುಡುಗನೇ। ನೀನೇ ಬಾ ಬೇಗ।।2।। ಕಾಳಿಂಗ ನ್ಹೆಡೆಯೊಳು ಗಟ್ಟೀಲಿಮೆಟ್ಟಿದ। ಆಲದೆಲೆಯಮೇಲೆ ಮಲಗಿದ್ದ। ಶ್ರೀಹರಿ ನೀನೇ ಬಾ ಬೇಗ।।3।।

### ಬಾರಯ್ಯ ಬಾಲಕೃಷ್ಣಾ ಬಾರೋ

ಬಾರಯ್ಯ ಬಾಲಕೃಷ್ಣಾ। ಬಾರೋ ಬೇಗನೆ।।ಪ।। ನೀರೆಯಾರು ನೆರೆದು ಮುತ್ತಿನ್ಹಾಸೆಬರದು ಎತ್ತಿ ಸ್ವರವಪಾಡಿ। ತೀರ್ಪರೋ ನಗೆಮುಖತೋರೋ।।1।। ಚೋರನಂತೆ ಸುಳಿದು। ಸೀರೆಗಳನೆ ಸೆಳೆದು। ಏರಿಮರವ ನಗುತಾ। ಸೇರಿದವರನೊಲಿಸಿದಂಥಾ।।2।। ಹೆಣ್ಣುಗಳನು ಸೇರಿ। ಸಣ್ಣನಗೆಯಬೀರಿ। ಕಣ್ಣಮುಚ್ಚಿ ನಗುತಾ। ಬೆಣ್ಣೆಕದ್ದಕಳ್ಳಕೃಷ್ಣ।।3।। ಮಡುವ ಧುಮುಕಿ ಭರದಿಹೆಡೆಯ ತುಳಿದು। ಕ್ಷಣದಿ ಬಿಡದೆಕಾಳಿಂಗಾನ ಹೆಡೆ ಧೂಳಿಮಾಡಿ ಬಂದ ಕೃಷ್ಣ।।4।। ಸಾಧು ಭಕ್ತರುಗಳು ಆದರೀಸಿಕಾಯ್ದ। ಆದಿತೇರವಾಸ। ಆದಿಕೇಶವಾ ದೇವ ದೇವ।।5।।

### ಬಾರೋ ಶ್ರೀಹರಿಯೇ ನಿನ್ನಯ

ಬಾರೋ ಶ್ರೀಹರಿಯೇ ನಿನ್ನಯ ಮುಖವನು ತೋರಿಸೋ ಬಾಲಕಿಯರ ಕೂಡಾಡುವಾಟವು ಸಾಕು ಬೇಗದಿ ಹಸೆಗೇಳೋ।।1।। ನೆಲುವಿನ ಪಾಲ್ ಬೆಣ್ಣೆಯ ಮೊಸರನು ಮೆಲುವುತಲಿ ನೀ ಬಾ। ಮಾವಕಂಸನ ಮಡುಹಿದಂತ ನೀಲ ವರ್ಣನೆ ಬಾ।।2।। ಅಂಗಿಯ ತೊಡಿಸಿ ಉಂಗುರ ವಿಟ್ಟು ಚಂದದಿ ಕರೆವೆನು ಬಾ ಇಂದಿರೇಶನೇ ಮಂದರ ಧರನೇ ಚಂದಿರಾಂಗನೆ ಬಾ।।3।। ಪಚ್ಚೆಯ ಪದಕ ವಜ್ರದ ವಂಟಿ ರತ್ನದ ಉಡಿದಾರ ಒಪ್ಪು ಹುಲಿಯುಗುರು ಅರಳೆಲೆ ಮಾಗಾಯಿ ತಪ್ಪದೆ ಇಡುವೆನು ಬಾ।।4।।

### ಮುದ್ದು ಬಾಲನೆ ಎದ್ದು ಬಾ ಹಸೇಗೆ ರಾಗ:ಸಿಂಧುಭೈರವಿ

ಮುದ್ದು ಬಾಲನೆ ಎದ್ದು ಬಾ ಹಸೇಗೆ। ಮುದ್ದು ಬಾಲನೇ।।ಪ।। ಆಟಪಾಟಂಗಳನೂ। ಅಣ್ಣ ಬಲನೊಳಾಡಿ ಸೃಷ್ಟಿಕರ್ತಮುದ್ದೂ। ಗೋಪಾಲ ಶ್ರೀ ಕೃಷ್ಣಾ।।1।। ಪಾಲುಬೆಣ್ಣೆಗಳನೂ ಮೆಲ್ಲುವೋದೆ ಕಂಡು। ಎಲ್ಲಗೋಪಿಯಾರು। ಗುಲ್ಲುಮಾಡುವೋರು।।2।। ದುರುಳನಾಗಿ ಪೋಗಿ। ಸೀರೆಗಳನೆಕದ್ದು। ನೀಮಾನೂನೀಯರ ಮಾನ ಕಳೆಯಬೇಡ ಕಂದಾ।।3।। ಮುದ್ದು ಬಾಲನೇ ಎದ್ದುಬಾಹಸೇಗೆ।।

### ಮುರಳೀಧರ ಪರಮ ದಯಾಕರ ರಾಗ:ಕುರಂಜಿ, ಆದಿತಾಳ

ಮುರಳೀಧರ ಪರಮ ದಯಾಕರ।।ಪ।। ಮೆರೆಯುವೀ ಪೀಠವ ಶೃಂಗರಿಸೈ।।ಅ.ಪ.।। ಹೊಳೆವೊ ಪೀತಾಂಬರ ಕೊರಳ ತುಳಸಿಹಾರ। ಧರಿಸಿಹೆ ಶಂಖು ಚಕ್ರ ಗದಾಬ್ಜಕರಾ।।1।। ಸುರತರುಣಿಯರು ನೆರೆದು ರಾಜಿಪೊರು। ವರ ಅಪ್ಸರೆಯರು ನೆರೆದು ನರ್ತಿಪರು।।2।। ಗರುಡ ಹನುಮಂತರು ಭರದಿ ಸೇವಿಪರು। ಮುರಳಿ ಮೋಹನ ಕರುಣಾ ಸಿರಿರಮಣ।।3।।

### ಹಸೆಗೆ ಕರೆತಾರೆ ವಸುದೇವ ಪುತ್ರನ

ಹಸೆಗೆ ಕರೆತಾರೆ ವಸುದೇವ ಪುತ್ರನ, ಬಿಸಜ ಗಂಧಿ ನಿನ್ನ ಪತಿಯ ಕುಸುಮನೇತ್ರನಾ...।।ಪ।। ಪುರದಿ ಸಕಲರೆಲ್ಲ ಸೇರಿಪ ಸುರರರಸನ ವರಗಿರಿಯನೆತ್ತಿ ದಯದಿ ವೀರ ದೇವನಾ...।।1।। ಸಣ್ಣವಾಗಿ ಹೆಣ್ಣುಮಕ್ಕಳ ಬಣ್ಣಿಸಿದನ ಕಣ್ಣ ನೋಟದಿಂದಲಿರುವ ಬೆಣ್ಣೆ ಕೃಷ್ಣನಾ...।।2।। ಕಡಗೋಲು ಕರದಿ ಪಿಡಿದು ಮುದದಿ ಮಡದಿ ಮಣಿಯರ ಬಿಡದೆ ನಮ್ಮ ರಕ್ಷಿಸುವ ಒಡೆಯ ಕೃಷ್ಣನಾ....।।3।।

### ಹಸೆಗೆ ಬಾರೈ ಹರುಷದಿಂದ ರಾಗ:ಬೇಹಾಗ್, ರೂಪಕತಾಳ

ಹಸೆಗೆ ಬಾರೈ ಹರುಷದಿಂದ ವಸುದೇವತಾತ್ಮ ಜ।।ಪ।। ಎಸೆವ ಭೂಷಣಗಳ ತೊಟ್ಟು ಬಿಸಜ ಲೋಚನಾ।।ಅ.ಪ.।। ಮುದದಿ ಗೋಪಿಕಾಂಗನೆಯರು। ಮಧುರಗಾನದ ಪದದಿ ನಿನ್ನ ಕರೆಯುತಿಹರು। ಪದುಮನಾಭನೇ।।1।।

ವೇಣುಗಾನಲೋಲ ಲೋಕ ಶ್ರೇಣಿ ಪಾಲಕ ಕ್ಷೋಣಿ ಭಾರ ಹರಣ ಚಕ್ರಪಾಣಿ ಯದುಪತಿ।।2।। ನಿಗಮ ವಿನುತ ದಿವ್ಯ ಚರಿತ। ಸುಗುಣ ಪೂರಿತ ಜಗತಿ ಸೂತ್ರಧರ ನೃಸಿಂಹ ನಗವರೋದ್ಧರ।।3।।

### ಹಸೆಗೇಳು ಮುರವೈರಿ ವಸುದೇವ

ಹಸೆಗೇಳು ಮುರವೈರಿ ವಸುದೇವ ಸುತ ಶೌರಿ ಬಿಸುಜಾಕ್ಷಿ ಭವತಾರಿ ಶಶಿಮುಖೀ ಮನೋಹರ।।ಪ।। ಆಕಳ ಕಾಯುವನು ಕೊಳಲನೆ ಊದುವನು ಚದುರೆಯರು ಕೂಡಿ ಕ್ರೀಡೆಯಾಡಿದ ಬಾಲ।।1।। ಭಕ್ತರಾ ಪಾಲಿಪನು ದೈತ್ಯಾರ ಶಿಕ್ಷಿಪನು ಮುಕ್ತಿ ಕೊಡುವಾದಾತ ಕೃಷ್ಣ ಮೂರುತಿ ನೀನು।।2।। ಧರೆಯೊಳು ವೆಂಕಟಗಿರಿಯಲ್ಲಿ ನೆಲಸಿರ್ಪ ಪರಮ ಭಕ್ತರಿಗೆಲ್ಲ ವರವ ಕೊಡುತಿಹ ದೇವ।।3।।

## ಆರತಿ

### ಆರತಿ ಎತ್ತಿರೆ ಶ್ರೀ ಕೃಷ್ಣನಿಗೆ — ರಾಗ: ಸುರುಟಿ

ಆರತಿ ಎತ್ತಿರೆ ಶ್ರೀಕೃಷ್ಣನಿಗೆ ನಿತ್ಯ।।ಪ।। ಮಂಗಳಾರತಿ ಎತ್ತಿರೆ।।ಅ.ಪ.।। ವಸುದೇವಾತ್ಮಜ ಶಕ್ತ ಚತುರ್ಭುಜ। ಬಲರಾಮಾನುಜ ಶ್ರೀ ಕೃಷ್ಣಗೆ। ಚಾಣೂರ ಮರ್ದನ ಪನ್ನಗಶಯನ। ವಾಸವೃಂದಾವನ ರುಕ್ಮಿಣಿ ಕೃಷ್ಣಗೆ।।1।। ಮುದ್ದು ಮುಖದನೀರ। ಬೆಣ್ಣೆ ಮೆಲ್ಲುವ ಚೋರ। ಭಕ್ತ ಹೃದಯ ಮಾರ। ಶ್ರೀಕೃಷ್ಣಗೆ ಕೊರಳಲಿ ತುಳಸೀಹಾರ। ಕರದಿ ವೇಣು ಮಧುರ। ಧೀರನರ ಕೇಸರಿ ಭಾಮಾ ಕೃಷ್ಣಗೆ।।2।। ವೈಕುಂಠಧಾಮ ಪರಿಪೂರ್ಣಕಾಮ। ಯದುಕುಲ ಸೋಮ ಶ್ರೀಕೃಷ್ಣಗೆ। ಮಂಗಳರೂಪ ಭೂಮಂಡಲಾಧಿಪ। ಶಾರದೆ ಸನ್ನುತ ಜ್ಞಾನ ಪ್ರದೀಪಗೆ।।3।।

### ಆರುತಿ ಕೋರ ಶ್ರೀ ವಾಸುದೇವ

ಆರುತಿ ಕೋರ ಶ್ರೀ ವಾಸುದೇವ। ಇಕ ಜಾಗೇಲ ರಾದೇವ। ಓ ವಾಸುದೇವ। ಶ್ರೀ ವಾಸುದೇವ।।ಪ।। ನಂದಗೋಕುಲ ನಾರಿಲ ಸ್ವಾಮೈತಿವಿ। ಅಂದ ಚಂದಾಲ ಸಿಂಧೂರ। ಪೂ ವೈ ತಿ ವಿ। ನಿನ್ನು ಸೇವಿಂಚದಾ। ನನ್ನು ದಯ ಜೂಡವಾ। ಈ ಸುಂದರ ಲಾರುತಿಗೈ ಕೊನುರಾ ಓ...।।1।। ಫುಲ್ಲ ಜಾಕ್ಷಿಲು ಪಿಲುವಾರು ಪಲಕೊಚರ। ಇಲ ಭಾಮುಲ ಪಾಲಿಂಚಿ। ದೀವಿಂಚುರಾ। ಚೆಲಿಸುಂದಾರಿ ತೋಗೊಲ್ಲ ಭಾಮಾಲು ತೋ। ಈ ಚಲ್ಲನಿ ಆರುತಿಗೈ ಕೊನುರಾ ಓ...।।2।। ನೀಲ ಮೇಘಾಲ ಪೋಲೇಟಿ। ಕನ್ನೂಲ ತೋ। ಪಾಲ ವೆನ್ನಾಲ ವೆಲ ಗೋವ ಮೊಗ ಮುನ ತೋ। ಬಾಲ ಗೋಪಾಲ ರಾ। ಸುಗುಣ ಶ್ರೀ ಲೋಲರಾ। ಈ ಚಲ್ಲನಿ ಆರುತಿ ಗೈ ಕೊನು ರಾ ಓ ....।।3।।

### ಆರತಿಯನೆತ್ತಿರೆ ಕಂಸಾರಿಕೃಷ್ಣಗೆ — ರಾಗ: ಸುರಟಿ, ರೂಪಕತಾಳ

ಆರತಿಯನೆತ್ತಿರೆ। ಕಂಸಾರಿಕೃಷ್ಣಗೆ। ವಾರಿಜಾಸನಾದಿ ಸುರವರ ವಿನುತಗೇ।।ಪ।। ಪಾಂಡವರನು ಪೊರೆದ ಅಖಂಡ ಮಹಿಮಗೆ। ಕುಂಡಲೀಂದ್ರ ಶಯನಾ ಕೌಂಡಿನ್ಯ ವರದಗೇ। ದಂತಿ ವರದನಾದ ಅನಂತ ದೇವಗೆ। ಸಂತತ ಜಗದಿ ಜೀವರಂತರಾತ್ಮಗೆ।।1।। ಸುಧೆಯನಿತ್ತು ಸುರರ ಪೊರೆದ ಉದಧಿಶಯನಗೇ। ಮದನಜನಕ ಶ್ರೀಮದನಂತ ಪದುಮನಾಭಗೇ।।2।। ತರುಣಿ ಮೊರೆಯ ಕೇಳಿ ಪೊರೆದ ಕರುಣ ಶರಧಿಗೇ। ದುರುಳ ಕೌರವ ಕುಲವ ತರಿದ ಪರಮಪುರುಷಗೇ।।3।। ಮೆರೆವ ಯಾದವಾದ್ರಿಯೊಳಗೆ ಇರುವ ದೇವಗೇ। ವರದ ಯೋಗನರಸಿಂಹಗೇ ತರುಣಿ ಮಣಿಯರೂ।।4।।

### ಆರುತಿಯ ಮಾಡಿರೆ ಅರವಿಂದ

ಆರುತಿಯ ಮಾಡಿರೆ ಅರವಿಂದ ನಯನೇಯರು। ಮಾರಸುಂದಾರಸುಕುಮಾರಗೆ। ಧೀರಗೇ।।ಪ।। ಮರವನೇರಿ ಸೀರೆಗಳನು ಸೇರಿಸಿಟ್ಟವನಿಗೆ। ನಾರಿಯೇರ ಮಾನವೆಲ್ಲಾ। ಸೂರೆಗೊಂಡಾತಗೆ।।1।। ರಾಕ್ಷಸಾದಿಗಳನು। ಶಿಕ್ಷಿಸಿದಾ

ಮಹಾಪುರುಷಗೆ। ಲಕ್ಷ್ಮೀವಕ್ಷವಾಸಗೆ। ರಕ್ಷಗೆ ಮೋಕ್ಷಗೆ।।2।। ಪಾಂಡುಪಕ್ಷಪತಿಯಾದ। ಪಾಂಡುರಂಗವಿಠಲಗೇ। ಅಪಾರವಾದ ಮಹಿಮಗೇ। ಪಾರ್ಥನಾಸಾರಥೀಗೆ।।3।।

**ಆರುತಿಯ ಮಾಡುವೆವು ರಾಧಾಕೃಷ್ಣನಿಗೆ** **ರಾಗ: ಅಭೇರಿ**

ಆರುತಿಯ ಮಾಡುವೆವು ರಾಧಾಕೃಷ್ಣನಿಗೆ ಗೋಪಾಲ ರಾಧಾಕೃಷ್ಣನಿಗೆ।।ಪ।। ಮಥುರೆಯಲ್ಲಿ ಪುಟ್ಟಿದನಂತೆ। ಗೋಕುಲದಲ್ಲಿ ಬೆಳೆದನಂತೆ। ಗೋಪಿ ಜನರ ಧುಮುಕಿದನಂತೆ। ಕಾಳಿಂಗದ ಹೆಡೆಯ ತುಳಿದನಂತೆ। ವಿಷವನೆಲ್ಲ ಕಲಕಿ ಕೃಷ್ಣ। ಧಿಮಿಕ್ಕೆಂದು ಕುಣಿದು ಕೃಷ್ಣ।।2।। ಕಡಲ ಮರವನೇರಿದನಂತೆ। ಕರಡಿ ಮಗಳ ತಂದನಂತೆ। ಕೊಡಲಿ ಪಿಡಿದು ಕಡಿದ ನಾಗ। ಮೂರು ಲೋಕದೊಡೆಯ ಶ್ರೀಕೃಷ್ಣ।।3।।

**ಆರುತೀಯ ಮಾಡುವೇವು ರಾಧಾರಂಗರಿಗೇ** **ರಾಗ: ಅಭೇರಿ**

ಆರುತೀಯ ಮಾಡುವೇವು ರಾಧಾರಂಗರಿಗೇ ಗೋಪಾಲ।।ಪ।। ಗೋಕುಲದಲ್ಲಿ ಹುಟ್ಟಿದನಂತೆ। ಗೋವುಗಳನೇ ಕಾಯ್ದನಂತೆ ಗೋಪಿಯರ ಸೀರೆಸೆಳೆದು ಮರವನೇರಿದನೇ ಗೋಪಾಲ।।1।। ಕಾಲಲ್ಲಿ ಶಕಟನ ಒದ್ದನಂತೆ। ಕಲ್ಲಿನ ಕಂಬ ಕಿತ್ತನಂತೆ। ಕಾಳಿಂಗನಾಭನ ಹೆಡೆಯ ತುಳಿದು ನಾಟ್ಯವಾಡಿದನೇ ಶ್ರೀಕೃಷ್ಣ।।2।।

**ಬೆಳಗುವೆನಾರುತಿಯಾ ಪಾರ್ಥನಸಾರುತಿಗೆ** **ರಾಗ: ಸಾರಂಗ**

ಬೆಳಗುವೆನಾರುತಿಯಾ ಪಾರ್ಥನಸಾರುತಿಗೆ।।ಪ।। ಅಘೌಧ ಮಹಿಮನಿಗೇ ಅಜಮಿಳ ನಾಥನಿಗೇ। ರಾಧಾರಮಣನಿಗೇ ರಾಗದಿಂ ಪಾಡುವೆವು।।1।। ರುಕ್ಮಿಣಿ ವಲ್ಲಭನಿಗೇ ರೂಪದಿ ಮೋಹಿತಗೇ ಅಭಯವ ನೀಡೆಂದು ಅಭಯದಿ ಬೆಳಗುವೆವು।।2।।

**ಬೆಳಗುವೆನಾ ಮಾಡುವೆನಾ** **ರಾಗ: ಆನಂದಭೈರವಿ**

ಬೆಳಗುವೆನಾ। ಮಾಡುವೆನಾ। ಸರಸಿಜನಾಭನಿಗಾರುತಿಯ। ಸುಂದರ ಮೂರುತಿಗಾರುತೀಯ ಬೆಳಗುವಾ।।ಪ।। ಶೇಷಶಯನನಿಗೆ ವಾಸುದೇವನಿಗೆ ಸುಂದರ ಕೃಷ್ಣಗೆ ಬೆಳಗುವೆನಾರತಿ।।1।। ನಂದನ ಕಂದಗೆ ನವನೀತ ಚೋರಗೆ ಬೃಂದಾವನದಲಿ ನೆಲಸಿದ ಕೃಷ್ಣಗೆ।।2।। ಬಲತಾಯಿ ಮಾತಕೇಳಿ ವನಕೆತಾ ಚಲಿಸಿದ। ರಘುರಾಮ ಕೃಷ್ಣಗೆ ಬೆಳಗುವೆನಾ ಮಾಡುವೆನಾ।।3।।

**ಮುತ್ತಿನಾರತಿ ಎತ್ತಿ ಕೃಷ್ಣಗೆ ಮಿತ್ರೆಯಾರು** **ರಾಗ: ಶಂಕರಾಭರಣ (ನೋಟ್)**

ಮುತ್ತಿನಾರತಿ ಎತ್ತಿ ಕೃಷ್ಣಗೆ ಮಿತ್ರೆಯಾರು ಎತ್ತಿದರು ಸತ್ಯಭಾಮೆಗೆ ।।ಪ।। ಚಿನ್ನದಾರುತಿ ಚಿನ್ಮಯಾನಿಗೆ ಚೆಲ್ವೆಯಾರು ಎತ್ತಿದಾರು ಚಿನ್ನಿ ಕೃಷ್ಣಗೆ ।।1।। ರತ್ನದಾರುತಿ ರಮಣ ಕೃಷ್ಣಗೆ ರಾಜಬೀದಿಯಲ್ಲಿ ಮೆರೆವೊ ರಾಮಚಂದ್ರಗೆ।।2।। ರಂಭೆ ಮೇನಕೆ ನಾಟ್ಯವಾಡುತ ತುಂಬುರಾದಿ ನಾರದರು ಗಾನಪಾಡುತ।।3।।

**ಮುತ್ತಿನಾರತಿ ಎತ್ತುವೆನೀಗ** **ರಾಗ: ಮೋಹನ**

ಮುತ್ತಿನಾರತಿ ಎತ್ತುವೆನೀಗ। ಜಯರಾಧಾ ಕೃಷ್ಣಗೆ ಬೇಗ। ಮುತ್ತಿನಾರತಿ ಎತ್ತುವೇನೀಗ।।ಪ।। ಗೋಕುಲದಲ್ಲಿ ಪುಟ್ಟಿದವಗೆ ಗೋಪ್ಯರ ಶರಣೊಲಿದವಗೆ। ಮಾವನ್ನ ಕೊಂದಂತ ಧೀರ ಶ್ರೀ ಕೃಷ್ಣನಿಗೆ।।1।। ಕರದಿ ತ್ರಿಶೂಲವ ಪಿಡಿದು ಹರಿಯನ್ನೆ ಸ್ಮರಿಸಿ। ಅರ್ಜುನಗೆ ಅಸ್ತ್ರವನು ಕೊಟ್ಟ ಮಹೇಶ್ವರಗೆ।।2।। ಜನಕನ ವಾಕ್ಯವ ಸಲಹಿ ಸತಿ। ಜಾನಕಿಯೊಡನೆ ತೆರಳಿ। ಭರತನಿಗೆ ಪಾದುಕೆಯ ಕೊಟ್ಟ ಶ್ರೀರಾಮನಿಗೆ।।3।। ಕರದಲಿ ಕೊಳಲನು ಪಿಡಿದು ಸತಿ ರುಕ್ಮಿಣಿಯೊಡನೆ ತೆರಳಿ। ಸುಧಾಮನಿಗೆ ಭಾಗ್ಯವನು ಕೊಟ್ಟ ಶ್ರೀ ಕೃಷ್ಣನಿಗೆ।।4।।

**ಮುತ್ತಿನಾರತಿ ಎತ್ತಿರೆ ಸತ್ಯ ಸಮೇತಗೆ** **ರಾಗ:ಮಾಂಡ್**

ಮುತ್ತಿನಾರತಿ ಎತ್ತಿರೆ ಸತ್ಯ ಸಮೇತಗೆ। ಮಿತ್ರೆಯರು ಇತ್ತು ವೀಳ್ಯೆಯ ನಿತ್ಯ ನಿರ್ಮಲಗೆ ಚಿತ್ತ ಜನ್ನ ಪೆತ್ತ ಸರ್ವೋತ್ತಮನಿಗೆ ಅರ್ಥಿಯಿಂದಲೇ॥ಪ॥ ತರಳನಾಗಿ ಒರಳನೆಳೆದ ಪರಮ ಪುರುಷನಿಗೇ। ಮರಗಳನ್ನೇ ಮುರಿದ ಶಾಪ ಹರಿದು ಭಕ್ತರ ಪೊರೆದ ಕೃಷ್ಣಗೆ॥1॥ ಧಾರುಣಿಯೊಳು ವಾರ ಯದುಗಿರಿ ಸೇರಿ ಮೆರೆದಗೆ। ಧೀರಯೋಗಾಧಾರನಾದ ನರಸಿಂಹಗೆ ನೀರೆಯರೆಲ್ಲರು॥2॥

**ಲಕುಮೀಶ ನಿನಗಾರುತಿ** **ರಾಗ:ಸಿಂಧೂಭೈರವಿ**

ಲಕುಮೀಶ ನಿನಗಾರುತಿ। ಭಕೂತಿಯಿಂದಾಲೆತ್ತುವೇ। ಸಕಲರ ಸುಖಕರ। ಭಕ್ತರಿಗೊಲಿದ ಶ್ರೀರುಕ್ಮಿಣಿ ಅರಸನೆ॥1॥ ಇನುಕುಲಾತಿಲಕನೇ। ಜನಕಜೆ ಅರಸನೇ। ನಮಿಸುವೇ। ಪಾಮರರ। ಭಕ್ತರಿಗೊಲಿದ ಶ್ರೀ ರುಕ್ಮಿಣಿ ಅರಸನೆ॥2॥ ಲಕೂಮೀಶಾನಿಮಗಾರುತೀ। ಭಕೂತಿಯಿಂದಾಲೆತ್ತುವೇ ಸಕಲರ ಸುಖಕರ ಭಕ್ತರಿಗೊಲಿದ ಶ್ರೀ ರುಕ್ಮಿಣಿ ಅರಸನೆ॥3॥

**ವೇಣುಗಾನ ಲೋಲಗೆ** **ರಾಗ:ಕುಂತಲವರಾಳಿ**

ವೇಣುಗಾನ ಲೋಲಗೆ ಜಯಜಯಾ। ಕಾಮಜಲದಿಸೋಮರೂಪ। ರಾಮಕೃಷ್ಣಗೆ। ಕಾಮಿತಾರ್ಥ ಪ್ರೇಮದಾಯಕ ಕನಕ ಖಚಿತ ತಒಕಿನಲ್ಲಿ। ಹವಳದಾರುತಿ॥1॥ ಮಡದಿ ರುಕ್ಮಿಣಿ ಸತ್ಯಭಾಮ ಬೆಳಗುವಾರತಿ। ಸಾರಿಬಾರೋ ಮಾರಸುಂದರಾ। ದಿಟ್ಟಗಿರಿಯಶೇಷನಿಗೆ। ಮುತ್ತಿನಾರುತಿ॥2॥ ಸುರರು ಅಂಬರದಲ್ಲಿ ಪುಷ್ಪವೃಷ್ಠಿಕರೆಯಲು ವೇದಘೋಷವಾದ್ಯವು॥3॥

**ಸಾರಸದಳನೇತ್ರ ನೀ ಬಾ2** **ರಾಗ:ಆನಂದಭೈರವಿ**

ಸಾರಸದಳನೇತ್ರ ನೀ ಬಾಬಾ। ನಾಗದೇವಕಿ ಪುತ್ರಾ॥ಪ॥ ಮಣಿಗಣಖಚಿತ ಕಿರೀಟವು। ತಲೆಯೊಳು ಫಣೆಯೊಳು ಹೊಳೆಯುವಾ ಕಸ್ತುರಿ ತಿಲುಕ। ಆಣಿಮುತ್ತಿನ ಓಲೆ ಬಾವುಲಿ ಕನ್ನಡಿ ಗುಣನಿಧಿಯೆ ಧರಿಸುತ ನೀ ಬಾಬಾ॥1॥ ಉತ್ತಮವಾದ ಪೀತಾಂಬರವನುಟ್ಟು। ಶಿಸ್ತಿನಿಂದಲೆ ಕೊಳಲನೆಪಿಡಿದು। ನಿತ್ಯ ಸ್ವರಂಗಳಾ। ಸ್ವರವೆತ್ತಿ ಪಾಡುತ್ತ। ಉತ್ತಮ ಗುಣ ನಿಧಿಯೇ। ಶ್ರೀಹರಿಯೇ॥2॥ ಪರಿಪರಿ ಸರವಾ ರತ್ನಹಾರ ಮುತ್ತಿನಸರ। ಕೊರೊಳೊಳು ಹೊಳೆಯುವಾ ಮಲ್ಲಿಗೆ ಹಾರ। ಆಣಿಮುತ್ತಿನ ವಂಟೀ। ಬಾವುಲಿ ಕನ್ನಡಿ ಗುಣನಿಧಿಯೇ। ಧರಿಸುತ ನೀ ಬಾಬಾ॥3॥

## ಮಂಗಳ

**ಮಂಗಳಂ ಶ್ರೀ ಮುದ್ದು ಕೃಷ್ಣನಿಗೆ** **ರಾಗ: ಸುರುಟಿ**

ಮಂಗಳಂ ಶ್ರೀ ಮುದ್ದು ಕೃಷ್ಣನಿಗೆ। ಮುದ್ದು ಕೃಷ್ಣನಿಗೆ। ಅರವಿಂದ ನಯನ ಗೋಪಾಲನಿಗೇ॥ಪ॥ ಪಾದದಿ ಗಂಗೆಯ ಪೊತ್ತವಗೆ ತಾ ಪಡೆದವಗೆ। ಹಸ್ತರಾದರದಿಂ ಕೊಳಲೂದಿದವಗೇ। ವಾರಿಜಾಕ್ಷಿ ಮನಸಲಿಸಿದಗೇ। ಮನಸಲಿಸಿದಗೇ। ಈ ಧೀರ ಶ್ರೀ ಕಾವೇರಿ ರಂಗಯ್ಯನಿಗೆ॥1॥ ಶಂಖ ಚಕ್ರಾಂಕಿತ ಶ್ರೀ ಹರಿಗೇ। ಕುಂಕುಮವ ನೊಸಲೊಳಗಿಟ್ಟವಗೇ। ಪಂಕಜಾಕ್ಷ ಮನಸಲಿಸಿದಗೇ। ಮನಸಲಿಸಿದಗೇ। ಶ್ರೀ ಶಂಖನಾದ ಮುದ್ದು ಕೃಷ್ಣನಿಗೆ॥2॥

**ಮಂಗಳಾರತಿ ಭುಜಂಗ ಶಯನಗೆ** **ರಾಗ:ಶಂಕರಾಭರಣ ನೋಟ್ಸ್-ಏಕತಾಳ**

ಮಂಗಳಾರತಿ ಭುಜಂಗ ಶಯನಗೆ। ಮಂಗಳಾರತಿಯನೆತ್ತಿ ಮಂಗಳಾಂಗಗೆ॥ಪ॥ ಗೋಪಿ ಕಂದಗೆ ಗೋಪಾಲ ಬಾಲಗೆ। ಗೋಪಿಯರ ವಸ್ತ್ರಗಳ ಎತ್ತಿಪಿಡಿದಗೆ॥1॥ ನಳಿನನಾಭಗೆ ಕೊಳಲ ಪ್ರೀಯಗೆ। ಖಳರ ಕೊಂದು ಇಳೆಯನೆಲ್ಲ ಸಲಹಿದಾತಗೆ॥2॥ ಸೃಷ್ಟಿಕರ್ತಗೆ ಇಷ್ಟಾರ್ಥಕೊಡುವಗೆ। ಕಷ್ಟದಲ್ಲಿ ಸಲಹುವಾತ ಸ್ವಾಮಿ ಕೃಷ್ಣಗೆ॥3॥

**ವರರತ್ನಮಯ ಕಿರೀಟಕೆ ಮಂಗಳಂ** **ರಾಗ: ಸುರುಟಿ**

ವರರತ್ನಮಯ ಕಿರೀಟಕೆ ಮಂಗಳಂ। ಭ್ರಮರವನು ಪೋಲ್ವ ಕುಂತಳಕೆ ಮಂಗಳಂ। ಹಣೆಯ ಮೇಲಿರುವ ಕೌಸ್ತುಭಕೆ ಮಂಗಳಂ। ಶೇಷಶಯನ ವಾಸುದೇವ ಕೇಶವಗೆ। ಜಯ ಮಂಗಳಂ। ನಿತ್ಯ ಶುಭಮಂಗಳಂ।।1।। ಕನ್ನೈದಿಲೆಯ ಪೋಲ್ವ ಕಂಗಳಿಗೆ ಮಂಗಳಂ। ಕನ್ನಡಿಯ. ಪೋಲ್ವ ಕದಪಿಗೆ ಮಂಗಳಂ। ಸಣ್ಣ ಸಂಪಿಗೆ ಪೋಲ್ವ ನಾಸಿಕಗೆ ಮಂಗಳಂ। ಬಣ್ಣ ಬಿಂಬೋಧರನ ದಂತ ಪಂಕ್ತಿಗಳಿಗೆ ಜಯಮಂಗಳಂ ನಿತ್ಯ ಶುಭಮಂಗಳಂ।।2।। ಕೊರಳ ಮೂರೆಳೆ ಹಾರ ರತ್ನಕೆ ಮಂಗಳಂ। ಹಸನ್ಮುಖದ ಮೃದುವಚನ ಲಾಂಛನಕೆ ಮಂಗಳಂ। ಮೃದು ತುಳಸಿ ವೈಜಯಂತಿ ಮಾಲಿಕೆಗೆ ಮಂಗಳಂ। ವರಲಕ್ಷ್ಮಿ ನೆಲೆಸಿರುವ ವಕ್ಷಸ್ಥಳಕೆ ಜಯಮಂಗಳಂ ನಿತ್ಯ ಶುಭಮಂಗಳಂ।। 3।। ನಡುತೋಳು ಬಳೆ ತಾರೆ ಮಣಿಗಳಿಗೆ ಮಂಗಳಂ। ಮರುಡಿ ಸರಪಳಿ ಹೊಳೆವ ಮುದ್ರಿಕೆಗೆ ಮಂಗಳಂ। ಮುರುಳಿ ನುಡಿಸುವ ಬೆರಳು ಮುಂಗೈಗೆ ಮಂಗಳಂ। ಜಯಮಂಗಳಂ ನಿತ್ಯ ಶುಭಮಂಗಳಂ।।4।। ಶಂಖುಚಕ್ರವು ಗಧೆಯ ಪದುಮಕೆ ಮಂಗಳಂ। ಶಂಖುಯಿಲ್ಲದ ದೈತ್ಯರ ಸಂಹರಿಸಿದವಗೆ ಮಂಗಳಂ। ಶಂಖುಚಕ್ರಧರನ ಅಭಯ ಹಸ್ತಂಗಳಿಗೆ ಮಂಗಳಂ। ಶಂಕರಗೆ ಪ್ರಿಯನಾದ ದಯಾನಿಧಿಗೆ ಮಂಗಳಂ।।5।। ಗೆಜ್ಜೆಕಾಲ್ಕಡಗ ಪಾದಗಳಿಗೆ ಮಂಗಳಂ। ಮೇಲಕ್ಕೆ ಹೊಗಲಿ ಪ್ರಜ್ವಲಿಪ ವೀರ ಮುದ್ರಿಕೆಗೆ ಮಂಗಳಂ। ಗಜವಜ್ರ ಕುಜವಜ್ರ ರೇಖೆಗಳಿಗೆ ಮಂಗಳಂ। ಅರ್ಜುನನ ಸಾರಥಿಯಾದ ಪಾರ್ಥಸಾರಥಿಗೆ ಮಂಗಳಂ। ಜಯಮಂಗಳಂ ನಿತ್ಯ ಶುಭಮಂಗಳಂ।। 6।। ರಾಜೀವನಯನ ರಾಜೇಶ್ವರಗೆ ಮಂಗಳಂ। ರಜತಾದ್ರಿ ಗಿರಿವಾಸಗೆ ಮಂಗಳಂ। ಸಕಲ ಲೋಕವನ್ನೆಲ್ಲ ರಕ್ಷಿಪಗೆ ಮಂಗಳಂ। ರುಕ್ಮಿಣೀ ಪ್ರಿಯನಾದ ಶ್ರೀಕೃಷ್ಣನಿಗೆ ಮಂಗಳಂ। ಜಯಮಂಗಳಂ ನಿತ್ಯ ಶುಭಮಂಗಳಂ।।7।। ರಾವಣ ಕುಂಭಕರ್ಣರ ಸಂಹರಿಸಿದವಗೆ ಮಂಗಳಂ। ಕುಂಭಿನೀ ಸುತೆಯ ತಂದಿತ್ತವಗೆ ಮಂಗಳಂ। ನಂಬಿದ ವಿಭೀಷಣನಿಗೊಲಿದವಗೆ ಮಂಗಳಂ। ಜಂಬೂಪುರದ ನೆಲೆಯಾದಿಕೇಶವನ ಸರ್ವಾಂಗಗಳಿಗೆ ಮಂಗಳಂ।। ಜಯಮಂಗಳಂ ನಿತ್ಯ ಶುಭಮಂಗಳಂ।। 8।।

**ವಸುದೇವ ಮನೋಹರ ಬಾಲಾ** **ರಾಗ:ಸಾವೇರಿ, ಮಿಶ್ರಛಾಪುತಾಳ**

ವಸುದೇವ ಮನೋಹರ ಬಾಲಾ। ದೇವ। ವಸುಧಾದಿ ತರುಣಿ ಹೃಲ್ಲೋಲ। ದೇವ। ಬಿಸುಜಾಂಬಕ ವನಮಾಲಾ। ದೇವ। ಅಸುರ ಸಮೂಹಕೆ ಕಾಲಾ। ಕೃಷ್ಣಾ ಮಂಗಳಂ।।1।। ಖಂಡಿತ ದನುಜ ಪ್ರತಾಪಾ। ಮುನಿ ಮಂಡಲ ತ್ಯಕ್ತ ಸಂತಾಪ। ಪ್ರಚಂಡ ವಿಕ್ರಮ ಸ್ವರೂಪ। ಬ್ರಹ್ಮಾಂಡ ಭಾಂಡೋದಯ ಭೂಪ। ಕೃಷ್ಣಾ।।ಮಂಗಳಂ।।2।। ವಾರಿತ ಮುನಿಜನ ಕಷ್ಟ। ಸಂಪೂರಿತ ಸಾಧುಜನೇಷ್ಟ। ವಿದಾರಿತ ಸಕಲ ವಿದುಷ್ಟ ಮನೋರಥ ಪರಿಪೂರ್ಣ ಶಿಷ್ಟಾ।। ಕೃಷ್ಣಾ ಮಂಗಳಂ।।3।।

**ಶ್ರೀಕೃಷ್ಣಾ ಮಂಗಳಂ ಕಾರುಣ್ಯ** **ರಾಗ:ಶಂಕರಾಭರಣನೋಟ್ಸ್**

ಶ್ರೀಕೃಷ್ಣಾ ಮಂಗಳಂ। ಕಾರುಣ್ಯ ಪೂರಿತ। ಲೋಕಾದಿ ಸೇವಿತಾ।।ಪ।। ಪಾಂಡವಾ ಪಾಲನ। ಅಂಡಜಾವಾಹನ। ಶುಂಡಲಾ ಪುರೀಶನೇ। ತ್ರಿಭು ಮಂಡಲವ। ಪೊರೆಯುವ ಪುಂಡರೀಕಾಕ್ಷ।।1।। ಲಕ್ಷ್ಮೀಶ ಪಾಲಿಸೈ। ಕುಕ್ಷಿಯೊಳ್ ದಾಸರ ರಕ್ಷಿಸೈ ಲೋಕವ। ಅಕ್ಷಯವನಿತ್ತು। ಸಂರಕ್ಷಿಸೆನ್ನ। ಪಕ್ಷಿವಾಹನನೇ।।2।।

**ಐ ಮುರಳಿ ಮುಕುಂದಸ್ಮೇರ (ಕೃಷ್ಣ ಕರ್ಣಾಮೃತ)**

ಐ ಮುರಳಿ ಮುಕುಂದಸ್ಮೇರ ವಕ್ತಾರವಿಂದ ಶ್ವಸನ ಮಧುರ ಸಂಜ್ಞೆ ತ್ವಾಂ-ಪ್ರಣಮ್ಯ ಅಧ್ಯಯಾಚೆ।। ಅಧರಮಣಿ ಸಮೀಪ ಪ್ರಾಪ್ತವತ್ಯಾಂ ಭವತ್ಯಾಂ ಕರ್ಣೆ ರಹನಿ ಕಥೆಯ ಕರ್ಣೆ ಮದ್ದಶ್ಯಾಂ ನಂದ ಸುನೋಹೊ।।

**ಕಾರ್ತವೀರ್ಯಾರ್ಜುನೋ ನಾಮಃ**

ಕಾರ್ತವೀರ್ಯಾರ್ಜುನೋ ನಾಮಃ। ರಾಜ ಬಾಹು ಸಹಸ್ರಶಹ। ಯಸ್ಯ ಸ್ಮರಣ ಮಾತ್ರೇನ। ಗತಂ ನಷ್ಟಂಚ ಲಭ್ಯತೇ।।